# ❀ ಅವತಾರ ಪುರುಷ ❀

## ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು

### ದಕ್ಷಿಣಾಮ್ನಾಯ ಶ್ರೀ ಶೃಂಗೇರಿ ಶಾರದಾ ಪೀಠ

ಲೇಖಕ : ಗುರುಭಕ್ತ



ಲೇಖಕರು: ಗುರು ಭಕ್ತ

ಬೆಲೆ: ಗುರು ಭಕ್ತಿ



ಪುಸ್ತಕ ವಿನ್ಯಾಸ: ಗುರು ಭಕ್ತರಲ್ಲೊಬ್ಬ

ರಕ್ಷಾ ಪುಟ ವಿನ್ಯಾಸ: ಗುರುಭಕ್ತರಲ್ಲಿ ಮತ್ತೊಬ್ಬ

ಮುದ್ರಣ: ಆದಿತ್ಯ ಪ್ರಿಂಟರ್ಸ್, ಹನುಮಂತನಗರ, ಬೆಂಗಳೂರು

ಮುದ್ರಿತ ಕಾಗದ: ೭೦ ಜಿಎಸ್‌ಎಂ ಮ್ಯಾಪ್ಲಿಥೋ

ಮೊದಲನೇ ಮುದ್ರಣ: ೨೦೧೭

ಎರಡನೇ ಪರಿಷ್ಕೃತ ಮುದ್ರಣ: ೨೦೧೭

ಪುಸ್ತಕಕ್ಕಾಗಿ ಸಂಪರ್ಕಿಸಿ: 9986378762, 9886867001

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

# ಅವತಾರ ಪುರುಷ

## ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು

### ದಕ್ಷಿಣಾಮ್ನಾಯ ಶ್ರೀ ಶೃಂಗೇರಿ ಶಾರದಾ ಪೀಠ



ಛಾಯಾಚಿತ್ರ: ಗೂಗಲ್

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

ಸದಾತ್ಮ ಧ್ಯಾನ ನಿರತಂ ವಿಷಯೇಭ್ಯಃ ಪರಾಙ್ಮುಖಮ್

ನೌಮಿ ಶಾಸ್ತ್ರೇಷು ನಿಷ್ಣಾತಮ್ ಚಂದ್ರಶೇಖರ ಭಾರತೀಮ್

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊



# ಅರ್ಪಣೆ

ದೇವರು, ಗುರುಗಳು ಮತ್ತು ತಂದೆ–ತಾಯಿಯರ ಚರಣ ಕಮಲಗಳಲ್ಲಿ ಶರಣಾಗುತ್ತಾ

ಶೃಂಗೇರಿ ಶಾರದಾ ಪೀಠದ ಗುರುಪರಂಪರೆಗೆ

## ❀ ಮೊದಲ ಮಾತು ❀

ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳವರು ತುಂಗಾನದಿಯಲ್ಲಿ ದೇಹತ್ಯಾಗ ಮಾಡಿದರು ಎಂಬುದಷ್ಟೇ ನನಗೆ ಬಾಲ್ಯದಲ್ಲಿ ಗೊತ್ತಿದ್ದ ವಿಷಯ. ಗುರುಗಳ ಬಗ್ಗೆ ನನಗೆ ಮತ್ತಿನ್ನೇನೂ ಗೊತ್ತಿರಲಿಲ್ಲ. ಆದರೆ ಅವರ ಹೆಸರು ಕೇಳಿದೊಡನೆ ಏನೋ ಒಂದು ಬಗೆಯ ರೋಮಾಂಚನ. ನಾನು ಎರಡು ವರ್ಷಗಳ ಕೆಳಗೆ (೨೦೧೪) ಶ್ರೀಯುತ ಹುರಗಲವಾಡಿ ಲಕ್ಷ್ಮೀನರಸಿಂಹ ಶಾಸ್ತ್ರಿಗಳು ಬರೆದಿರುವ "ಮಹಾತಪಸ್ವಿ ಶ್ರೀ ಶ್ರೀ ಚಂದ್ರಶೇಖರ ಭಾರತೀ" ಎಂಬ ಪುಸ್ತಕವನ್ನು ಓದಿದೆ. ಅದನ್ನು ಓದಿದ ನಂತರ ನನಗೆ ಗುರುಗಳ ಮೇಲಿನ ಸೆಳೆತ ತೀವ್ರವಾಗಿ ಗುರುಗಳ ಬಗ್ಗೆ ಇನ್ನೂ ಹೆಚ್ಚು ತಿಳಿಯಬೇಕೆಂಬ ಆಸೆ ಪ್ರಬಲವಾಯಿತು. ತದನಂತರ ನಾನು ಒಂದಾದ ಮೇಲೆ ಒಂದರಂತೆ ಗುರುಗಳ ಬಗ್ಗೆ ಬರೆದಿರುವ ಪುಸ್ತಕಗಳನ್ನು ಓದಿದೆ. ಆದರೆ ಅಷ್ಟಕ್ಕೇ ನನ್ನ ಮನಸ್ಸು ತೃಪ್ತಗೊಳ್ಳದೆ, ಇನ್ನೂ ಹೆಚ್ಚು ತಿಳಿಯಬೇಕೆಂಬ ಆಸಕ್ತಿ ಉಂಟಾಯಿತು. ಆಗಿನಿಂದ ನಾನು ಗುರುಗಳ ಕಾಲದಲ್ಲಿದ್ದ ಹಲವರನ್ನು ಭೇಟಿ ಮಾಡಿ ಅವರ ಸ್ವಂತ ಅನುಭವಗಳನ್ನು ತಿಳಿದುಕೊಳ್ಳಲು ಪ್ರಾರಂಭಿಸಿದೆ. ಅದರಲ್ಲಿ ಕೆಲವರು "ನೀವು ಗುರುಗಳ ಬಗ್ಗೆ ಪುಸ್ತಕ ಬರೆಯುತ್ತಿದ್ದೀರಾ?" ಎಂದು ಕೇಳಿದ್ದರು. ನನಗೆ ಪುಸ್ತಕ ಬರೆಯಬೇಕೆಂಬ ಉದ್ದೇಶ ಇಲ್ಲದಿದ್ದರಿಂದ ಎಲ್ಲರಿಗೂ "ಗುರುಗಳ ಬಗ್ಗೆ ತಿಳಿಯಬೇಕೆಂಬ ಆಸಕ್ತಿಯಿಂದ ಬಂದಿದ್ದೇನೆಯೇ ಹೊರತು ಪುಸ್ತಕ ಬರೆಯುವ ಅಭಿಲಾಷೆ ಇಲ್ಲ" ಎಂದು ಹೇಳಿದ್ದೆ. ಆದರೆ ಒಬ್ಬರು ನನ್ನನ್ನು ಪರಿಚಯಿಸುವಾಗ "ಇವರು ಗುರುಗಳ ಬಗ್ಗೆ ಪುಸ್ತಕ ಬರೆದಿದ್ದಾರೆ" ಎಂದು ಹೇಳಿಬಿಟ್ಟರು. ಆಗ ನನಗೆ ಬಹಳ ಮುಜುಗರವಾಯಿತು. "ನಾನು

ಪುಸ್ತಕ ಬರೆದಿಲ್ಲ, ಓದಿದ್ದೇನೆ ಅಷ್ಟೇ" ಎಂದು ಅವರಿಗೆ ತಿಳಿಸಿದ್ದೆ. ಆದರೆ ಮತ್ತೆ ಕೆಲವು ಕಡೆಗಳಲ್ಲಿ ಅದೇ ಪುನರಾವರ್ತನೆಯಾಗಲು ಪ್ರಾರಂಭವಾಯಿತು. ನಂತರ ನಾನು ಇದು ಪುಸ್ತಕ ಬರೆಯುವದಕ್ಕೆ ಪ್ರೇರಣೆ ಇರಬಹುದು ಎಂದು ಎಣಿಸಿ ಬರೆಯಲು ನಿರ್ಧರಿಸಿದೆ.

ಆದರೆ ಏನು ಬರೆಯುವುದು ಮತ್ತು ಹೇಗೆ ಬರೆಯುವುದು? ನನಗೆ ಬರವಣಿಗೆಯಲ್ಲಿ ಅನುಭವವಿಲ್ಲ. ಈಗಾಗಲೇ ಹಲವರು ಗುರುಗಳ ಜೀವನ ಚರಿತ್ರೆಯನ್ನು ಬರೆದಿದ್ದಾರೆ ಮತ್ತು ಲೀಲಾಮೃತವನ್ನು ವರ್ಣಿಸಿದ್ದಾರೆ. ನಾನು ಸಹ ಮತ್ತೆ ಅದನ್ನೇ ಬರೆದರೆ ಕೇವಲ ಬರವಣಿಗೆ ಶೈಲಿ ಬದಲಾಗಬಹುದು. ಹಾಗಾದರೆ ಹೊಸದೇನು ನೀಡಬಹುದು? ಎಂದು ಯೋಚಿಸಿದೆ. ನಾನು ಹಲವಾರು ಜನರನ್ನು ಭೇಟಿಮಾಡಿ ಸಂಗ್ರಹಿಸಿದ್ದ ವಿಷಯಗಳನ್ನು ಪುಸ್ತಕ ರೂಪಕ್ಕೆ ತರಬಹುದು ಎಸಿನಿತು. ಆದರೆ ಗುರುಗಳ ಬಗ್ಗೆ ಮೊದಲ ಬಾರಿಗೆ ಓದುತ್ತಿರುವವರಿಗೆ ಅವರ ಜೀವನ ಚರಿತ್ರೆಯೇ ಗೊತ್ತಿಲ್ಲದೆ ಕೇವಲ ಜನಗಳ ಅನುಭವಗಳನ್ನು ಓದುವುದು ಅಷ್ಟು ಸಮಂಜಸವೆನಿಸಲಿಲ್ಲ. ಹಾಗಾಗಿ ಗುರುಗಳ ಜೀವನ ಚರಿತ್ರೆ, ಅವರು ಭಕ್ತರನ್ನು ಅನುಗ್ರಹಿಸಿದ ಘಟನೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿ, ನಾನು ಸಂಗ್ರಹಿಸಿದ್ದನ್ನು ಸೇರಿಸಿ ಒಂದು ಪುಸ್ತಕವನ್ನು ಬರೆಯಲು ನಿರ್ಧರಿಸಿದೆ.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ವ್ಯಕ್ತಿತ್ವವನ್ನು ಕೇವಲ ಪುಸ್ತಕದಲ್ಲಿ ಹಿಡಿದಿಡಲು ಸಾಧ್ಯವಿಲ್ಲ. ಆದರೆ ಅವರ ರೀತಿ ನಮ್ಮಂಥ ಸಾಮಾನ್ಯರಿಗೆ ಜೀವನ ನಡೆಸಲು ಅಸಾಧ್ಯವಾದದ್ದರಿಂದ ಪುಸ್ತಕದ ರೂಪದಲ್ಲಿಯಾದರೂ ಅಂತಹವರ ಜೀವನಚರಿತ್ರೆ ಓದಿ ಕೃತಾರ್ಥರಾಗಬಹುದು.

ಈ ಪುಸ್ತಕ ಬರೆಯಲು ಮತ್ತೊಂದು ಕಾರಣವೆಂದರೆ, ಎಷ್ಟೋ ಜನ ಓದುಗರು ೨೦೦–೩೦೦ ಪುಟಗಳು ಇರುವ ಪುಸ್ತಕಗಳನ್ನು ಪೂರಾ ಓದಲಾಗದೆ ಅರ್ಧಕ್ಕೆ ನಿಲ್ಲಿಸಿಬಿಡುವುದನ್ನು ನೋಡಿದ್ದೇನೆ. ತುಂಬಾ ವಿಸ್ತಾರ ಮಾಡದೆ ಸಂಕ್ಷಿಪ್ತವಾಗಿ ಬರೆದರೆ ಎಲ್ಲಾ ವರ್ಗದ ಓದುಗರು ಸುಲಭವಾಗಿ ಓದಿ ಮುಗಿಸಬಹುದು ಎಂಬ ಅಭಿಪ್ರಾಯದಿಂದ ಗುರುಗಳ ಜೀವನದಲ್ಲಿ ನಡೆದ ಪ್ರಮುಖಘಟ್ಟಗಳ ವಿವರಣೆಗಷ್ಟೇ ಸೀಮಿತಗೊಳಿಸಿ ಬರೆದಿದ್ದೇನೆ. ಓದುವ ಹವ್ಯಾಸವಿರದವರು ಸಹ ಸುಲಭವಾಗಿ ಓದಿ ಮುಗಿಸಬಹುದು ಎಂಬ ನಂಬಿಕೆಯಲ್ಲಿ ಇದ್ದು, ಗುರುಗಳ ಜೀವನಚರಿತ್ರೆಯನ್ನು ಹೆಚ್ಚು ಜನ ತಿಳಿದುಕೊಂಡು ಅವರ ಕೃಪೆಗೆ ಪಾತ್ರರಾಗಲಿ ಎನ್ನುವುದು ನನ್ನ ಆಶಯ.

ನಾನು ಮೂಲತಃ ಬರಹಗಾರನಲ್ಲವಾದ್ದರಿಂದ, ನನ್ನ ಬರವಣಿಗೆಯಲ್ಲಿ ಏನಾದರೂ ತಪ್ಪಿದ್ದರೆ ಓದುಗರು ಕ್ಷಮಿಸುತ್ತಾರೆ ಎಂಬ ನಂಬಿಕೆಯೊಂದಿಗೆ ಈ ಪುಸ್ತಕವನ್ನು ಹೊರತರುತ್ತಿದ್ದೇನೆ. ನಾನು ಗುರುಗಳ ಪುಸ್ತಕಗಳನ್ನು ಓದಿ, ಅವರನ್ನು ಆಶ್ರಯಿಸಿದ ಮೇಲೆ ನನ್ನಲ್ಲಿ ಹಲವಾರು ಬದಲಾವಣೆಗಳಾದವು. ಅದೇ ರೀತಿ ಓದುಗರೆಲ್ಲರಿಗೂ ಒಳ್ಳೆಯದಾಗಲಿ ಎಂದು ಆಶಿಸಿ, ದೇವರು ಮತ್ತು ಗುರುಗಳಲ್ಲಿ ಪ್ರಾರ್ಥಿಸಿ, ವೈಯಕ್ತಿಕವಾಗಿ ಯಾರ ಹೆಸರನ್ನೂ ಸೂಚಿಸದೆ ಈ ಪುಸ್ತಕ ಬರೆಯಲು ಮತ್ತು ಪ್ರಕಟಣೆ ಮಾಡಲು ಸಹಾಯ ಮಾಡಿದ ಪ್ರತಿಯೊಬ್ಬರಿಗೂ ನಾನು ಕೃತಜ್ಞತೆ ಸಲ್ಲಿಸುತ್ತಿದ್ದೇನೆ.

**ಗುರುಭಕ್ತ**

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

## ❀ ಮುನ್ನುಡಿ ❀

ಶ್ರೀ ದತ್ತಾತ್ರೇಯರು ತಮ್ಮ "ಜೀವನ್ಮುಕ್ತಗೀತೆ"ಯಲ್ಲಿ ಜೀವನ್ಮುಕ್ತನ ಲಕ್ಷಣವನ್ನು ವಿವರಿಸುತ್ತಾ, ಹೀಗೆ ನುಡಿದಿದ್ದಾರೆ "ಜೀವನ್ಮುಕ್ತಿ ಎಂಬುದು ಜೀವನೊಬ್ಬನು ತಾನು ಬದುಕಿರುವಾಗಲೇ ಹುಟ್ಟು ಸಾವುಗಳಿಂದ ಬಿಡುಗಡೆಯನ್ನು ಹೊಂದಿರುವ ಸ್ಥಿತಿ. ಜೀವನು ಸಾಕ್ಷಾತ್ ಶಿವನೇ ಆಗಿದ್ದಾನೆ. ಸೂರ್ಯನು ಜಗತ್ತನ್ನು ಬೆಳಗುವಂತೆ ಬ್ರಹ್ಮವು ಸರ್ವಭೂತಗಳಲ್ಲಿಯೂ ನೆಲಸಿ ಜೀವ ವ್ಯಾಪಾರವನ್ನು, ವ್ಯವಹಾರವನ್ನು ನಡೆಸುತ್ತದೆ. ಏಕವಾದ ಆತ್ಮಚೈತನ್ಯವು ಜೀವದೆಶೆಯನ್ನು ಪಡೆದು ಮಾಯೋಪಾಧಿಯಿಂದ ನಾನಾರೂಪಗಳನ್ನು ಧರಿಸಿದರೂ ಏಕವೂ, ಅಖಂಡವೂ, ನಿರ್ಮಲವೂ ಆಗಿರುತ್ತದೆ. ಯಾವಾತನು ತನ್ನ ಕರ್ಮೇಂದ್ರಿಯಗಳನ್ನೂ, ಜ್ಞಾನೇಂದ್ರಿಯಗಳನ್ನೂ ವಶದಲ್ಲಿ ಇರಿಸಿಕೊಂಡು ಜಗತ್ತಿನ ವ್ಯಾಪಾರಲೋಭಗಳಿಂದ ಅದನ್ನು ಹಿಮ್ಮೆಟ್ಟಿಸಿ ತನ್ನ ಮೂಲನೆಲೆಯಲ್ಲಿಯೇ ನಿಲ್ಲುವಂತೆ ಮಾಡುತ್ತಾನೋ, ಧ್ಯಾನದಿಂದ ಮನೋವ್ಯಾಪಾರವನ್ನು ನಿಗ್ರಹಿಸಿ ಆತ್ಮನನ್ನು ತನ್ನಲ್ಲಿ ಸಾಕ್ಷಾತ್ಕಾರ ಮಾಡಿಕೊಂಡಿರುವನೋ ಆತನೇ ಜೀವನ್ಮುಕ್ತನು. ಎಲ್ಲಾ ಭೂತಗಳಲ್ಲಿಯೂ ಇರುವ ಶಿವನು ಅನಾದಿಯಾಗಿದ್ದಾನೆ. ಆತನೇ ಜೀವನೆಂದು ಕರೆಯಲ್ಪಡುತ್ತಿದ್ದಾನೆ. ಜೀವನಿಗೆ ನಾಶವಿಲ್ಲ. ಈ ಸತ್ಯವನ್ನು ಅರಿತವನು ಸಕಲ ಭೂತಗಳಲ್ಲಿಯೂ ವೈರವಿಲ್ಲದೆ ಬಾಳುತ್ತಾನೆ ಇವನೇ ಜೀವನ್ಮುಕ್ತ ಎನಿಸಿಕೊಳ್ಳುತ್ತಾನೆ". ಹೀಗೆ ಶ್ರೀ ದತ್ತಾತ್ರೇಯರು ೨೪ ಶ್ಲೋಕಗಳಲ್ಲಿ ಜೀವನ್ಮುಕ್ತನ ವಿವಿಧ ಲಕ್ಷಣಗಳನ್ನು ವಿವರಿಸಿದ್ದಾರೆ.

ನಮ್ಮ ಭರತಖಂಡದಲ್ಲಿ ಇಂತಹ ಜೀವನ್ಮುಕ್ತರು ಅನೇಕರು ಬೆಳಗಿ ಜೀವರಾಶಿಗೆ ಮಾರ್ಗದರ್ಶಕರಾಗಿದ್ದಾರೆ. ಅಂತಹವರಲ್ಲಿ ಇತ್ತೀಚಿನವರು ಶ್ರೀ ಚಂದ್ರಶೇಖರ ಭಾರತೀಗಳು (೧೮೯೨–೧೯೫೪),

ಶ್ರೀ ರಾಮಕೃಷ್ಣ ಪರಮಹಂಸರು (೧೮೩೬–೧೮೮೬) ಮತ್ತು ಶ್ರೀ ರಮಣಮಹರ್ಷಿಗಳು (೧೮೭೯–೧೯೫೦). ಇವರು ಜೀವನ್ಮುಕ್ತ ಸ್ಥಿತಿಗೆ, ಅವಧೂತ ಸ್ಥಿತಿಗೆ ಪ್ರತ್ಯಕ್ಷ ನಿದರ್ಶನವಾಗಿದ್ದಾರೆ. ಶಾಸ್ತ್ರಗಳು ಹೇಳುವ ಎಲ್ಲಾ ಲಕ್ಷಣಗಳೂ ಈ ಮಹಾತ್ಮರಲ್ಲಿದ್ದು, ಲೋಕೋಪಕಾರಕ್ಕಾಗಿಯೇ ಇವರು ಅವತರಿಸಿದರೆಂಬುದು ಇವರ ಜೀವನ ಚರಿತ್ರೆಗಳಿಂದ ಸ್ಪಷ್ಟಪಡುತ್ತದೆ.

ಪ್ರಸಕ್ತ ಕೃತಿ, ತೀರಾ ಇತ್ತೀಚಿನ ಅವಧೂತಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನು (೧೮೯೨–೧೯೫೪) ಕುರಿತ ಒಂದು ಭಾವ ಲಹರಿ. ಶ್ರೀ ಸ್ವಾಮಿಗಳವರ ಜೀವನಚರಿತ್ರೆಯನ್ನು ಓದಿ ಪ್ರಭಾವಿತರಾದ ಲೇಖಕ ಗುರುಭಕ್ತರು ತಮ್ಮ ಅಂತರಂಗದಲ್ಲಾದ ಭಾವನೆಗಳನ್ನು ಇಲ್ಲಿ ತೇಲಿಬಿಟ್ಟಿದ್ದಾರೆ. ಮೊದಲು ಸಂಕ್ಷಿಪ್ತವಾಗಿ ಶ್ರೀ ಗುರುಗಳವರ ಜೀವನಚರಿತ್ರೆಯನ್ನು ಬರೆದು ಅನಂತರ ತಾವು ಭೇಟಿ ಮಾಡಿದ ಅನೇಕರ ಅನುಭವಗಳನ್ನು ವಿವರಿಸಿದ್ದಾರೆ. ಲೇಖಕರೇ ಶ್ರೀ ಗುರುಗಳ ಜೀವನಚರಿತ್ರೆಯನ್ನು ಓದಿ, ತಮ್ಮ ದೈನಂದಿನ ನಡೆ–ನುಡಿಗಳಲ್ಲಿ ಬದಲಾವಣೆಯಾದುದನ್ನು ತಿಳಿಸಿದ್ದಾರೆ. ಪುಸ್ತಕ ರೂಪದಲ್ಲಿಯಾದರೂ ಅಂತಹ ಮಹಾತ್ಮರ ಜೀವನಚರಿತ್ರೆಯನ್ನು ಭಕ್ತ ಜನ ಓದಿ ಕೃತಾರ್ಥರಾಗಲಿ ಎಂಬ ಸದುದ್ದೇಶದಿಂದ ಈ ಪುಟ್ಟದಾದ ಮೌಲಿಕ ಕೃತಿಯನ್ನು ರಚಿಸಿದ್ದಾರೆ. ಶ್ರೀಯುತರಿಗೆ ಶ್ರೇಯಸ್ಸು ಉಂಟಾಗಲಿ ಎಂದು ಹಾರೈಸಿ ಇವರ ಗುರುಚರಿತ್ರೆಯ ಅಧ್ಯಯನವು ಹೀಗೆಯೇ ಮುಂದುವರಿದು ಇನ್ನೂ ಅನೇಕ ಮೌಲಿಕ ಕೃತಿಗಳು ಇವರ ಲೇಖನಿಯಿಂದ ಮೂಡಿಬರಲಿ ಎಂದು ಆಶಿಸುತ್ತೇನೆ.

ಶುಭಾಶಯಗಳೊಡನೆ

ಹುರಗಲವಾಡಿ ಶ್ರೀ ಲಕ್ಷ್ಮೀ ನರಸಿಂಹ ಶಾಸ್ತ್ರಿಗಳು
ಲೇಖಕರು
ಮೈಸೂರು

೦೩–೦೫–೨೦೧೭

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

## ❀ ಎರಡನೇ ಮುದ್ರಣಕ್ಕೆ ಮುನ್ನ ❀

ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಕುರಿತು "ಅವತಾರ ಪುರುಷ" ಎಂಬ ಒಂದು ಕಿರಿದಾದ ಪುಸ್ತಕವನ್ನು ಬರೆದು ಮುಗಿಸಿದಾಗ ನನಗೆ ಎರಡನೇ ಮುದ್ರಣ ಮಾಡಿಸುವ ಆಲೋಚನೆಯೇ ಇರಲಿಲ್ಲ. ಗುರುಗಳ ಆರಾಧನೆಯಲ್ಲಿ (ಮಹಾಲಯ ಅಮಾವಾಸ್ಯೆ) ಗುರುಭಕ್ತರಿಗೆ ಹಂಚುವುದು, ಪುಸ್ತಕ ಇನ್ನೂ ಉಳಿದರೆ ನಾನೇ ಕೆಲವರಿಗೆ ಕೊಟ್ಟು ಓದಲು ಹೇಳುವುದು ಎಂದುಕೊಂಡಿದ್ದೆ. ಆದರೆ ಗುರುಗಳ ಭಕ್ತರು ಅದು ಹೇಗೆ ಪುಸ್ತಕದ ಮಾಹಿತಿ ಪಡೆದರೋ ಗೊತ್ತಿಲ್ಲ ಕೆಲವೇ ದಿವಸಗಳಲ್ಲಿ ಮೊದಲ ಮುದ್ರಣದ ಸಂಪೂರ್ಣ ಪ್ರತಿ ಮುಗಿದುಹೋಯಿತು. ಅದಕ್ಕೆ ಕಾರಣ ಇಲ್ಲದಿಲ್ಲ. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಪರಮ ಭಕ್ತರು ಅಷ್ಟು ಸಂಖ್ಯೆಯಲ್ಲಿ ಇದ್ದಾರೆ ಎನ್ನುವುದು ಒಂದಾದರೆ ಇನ್ನೊಂದು ಕಾರಣವೆಂದರೆ, ನಾನು ಶೃಂಗೇರಿಗೆ ಹೋಗಿ ಉಭಯ ಜಗದ್ಗುರುಗಳಿಗೆ ಪುಸ್ತಕವನ್ನು ಅರ್ಪಿಸಿದಾಗ ಶ್ರೀ ವಿಧುಶೇಖರ ಭಾರತೀ ಸ್ವಾಮಿಗಳು ಮುಖಪುಟದಲ್ಲಿ ಆಗಿದ್ದ ಒಂದು ದೋಷವನ್ನು ಗಮನಿಸಿ "ಮುಂದಿನ ಮುದ್ರಣದಲ್ಲಿ ಇದನ್ನು ಸರಿಪಡಿಸಿ" ಎಂದು ನನಗೆ ಆಶೀರ್ವಾದ ಪೂರ್ವಕವಾದ ಆಜ್ಞೆ ನೀಡಿದ್ದರು. "ಮುಂದಿನ ಮುದ್ರಣ" ಎಂಬ ಅವರ ಆ ಒಂದು ಮಾತು ಇಂದು ಎರಡನೇ ಮುದ್ರಣ ಮಾಡಿಸುವ ಹಂತಕ್ಕೆ ತಂದಿದೆ.

ಪುಸ್ತಕ ವಿತರಣೆಯ ಸಮಯದಲ್ಲಿ ಹಲವಾರು ಗುರುಭಕ್ತರನ್ನು ಭೇಟಿಯಾಗುವ ಅವಕಾಶ ನನಗೆ ದೊರೆಯಿತು. ಅವರೆಲ್ಲರಿಗೂ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಬಗ್ಗೆ ಇರುವ ಭಕ್ತಿಯನ್ನು ಕಂಡು ನಾನು ಮೂಕವಿಸ್ಮಿತನಾದೆ. ಎಷ್ಟೋ ಜನ ಗುರುಗಳ ಪುಸ್ತಕವನ್ನು ನೋಡಿದೊಡನೆಯೇ ತುಂಬಾ ಭಾವುಕರಾದರು. ಮೊದಲ ಮುದ್ರಣವಾದ ನಂತರವೂ ಶ್ರೀ ಚಂದ್ರಶೇಖರ ಭಾರತೀ

ಸ್ವಾಮಿಗಳ ದರ್ಶನ ಪಡೆದಿದ್ದ ಕೆಲವು ವ್ಯಕ್ತಿಗಳು ತಮ್ಮ ಅನುಭವಗಳನ್ನು ನನ್ನೊಡನೆ ಹಂಚಿಕೊಂಡರು. ಅವುಗಳನ್ನು ಈ ದ್ವಿತೀಯ ಪರಿಷ್ಕೃತ ಮುದ್ರಣದಲ್ಲಿ ಸೇರಿಸಿದ್ದೇನೆ. ಹಾಗೆ ಗುರುಗಳ ಉಪದೇಶ, ಪ್ರವಚನ, ಸಂಭಾಷಣೆಗಳು ಹಲವಾರು ಪುಸ್ತಕದಲ್ಲಿ ಈಗಾಗಲೇ ಬಂದಿದ್ದು ಅದರಲ್ಲಿರುವ ಕೆಲವೊಂದನ್ನು ಆರಿಸಿ ನುಡಿಮುತ್ತುಗಳ ರೀತಿ ಪರಿವರ್ತಿಸಿ ಹಾಕಿದ್ದೇನೆ.

ಎರಡನೇ ಮುದ್ರಣಕ್ಕೆ ಸಹಾಯ ಮಾಡಿದ ಎಲ್ಲರಿಗೂ ನಾನು ಕೃತಜ್ಞತೆ ಸಲ್ಲಿಸುತ್ತಿದ್ದೇನೆ. ಈ ಪುಸ್ತಕವನ್ನೂ ಸಹ ಭಕ್ತರು ಓದಿ ಗುರುಗಳ ಕೃಪೆಗೆ ಪಾತ್ರರಾಗುತ್ತಾರೆ ಎನ್ನುವ ನಂಬಿಕೆ ಇದೆ.

**ಗುರುಭಕ್ತ**

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

**ಹೆಸರು:** ಜಗದ್ಗುರು ಶ್ರೀ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು

**ಪೀಠ:** ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠ

**ಊರು:** ಶೃಂಗೇರಿ

**ಪೂರ್ವಾಶ್ರಮದ ಹೆಸರು:** ನರಸಿಂಹಶಾಸ್ತ್ರೀ

**ತಂದೆಯ ಹೆಸರು:** ಗೋಪಾಲಶಾಸ್ತ್ರಿಗಳು

**ತಾಯಿಯ ಹೆಸರು:** ಲಕ್ಷ್ಮಮ್ಮ

**ಅಜ್ಜನ ಹೆಸರು:** ಸುಬ್ಬಾಶಾಸ್ತ್ರಿಗಳು

**ಮೂಲ ಸ್ಥಳ:** ಪಟಗುಪ್ಪೆ

**ಮನೆದೇವರು:** ಶ್ರೀ ಲಕ್ಷ್ಮೀ ನರಸಿಂಹ

**ತಾಯಿಯ ತವರು:** ಸಕಲೇಶಪುರ

**ಮನೆತನದ ಹೆಸರು:** ಈಶ್ವರೀ

**ವೇದಾಭ್ಯಾಸ:** ಸದ್ವಿದ್ಯಾ ಸಂಜೀವಿನೀ ಸಂಸ್ಕೃತ ಮಹಾಪಾಠಶಾಲೆ, ಶೃಂಗೇರಿ

**ಹುಟ್ಟಿದ ದಿನಾಂಕ:** ೧೬–೧೦–೧೮೯೨

**ದಿನ:** ಶ್ರೀ ನಂದನ ಸಂವತ್ಸರದ ಆಶ್ವಯುಜ ಬಹುಳ ಏಕಾದಶೀ

**ಸನ್ಯಾಸ ಸ್ವೀಕಾರ:** ೦೭–೦೪–೧೯೧೨

**ದಿನ:** ಪರಿಧಾವೀ ಸಂವತ್ಸರದ ಚೈತ್ರ ಬಹುಳ ಷಷ್ಠಿ

**ದೇಹತ್ಯಾಗ ಮಾಡಿದ ದಿನಾಂಕ:** ೨೬–೦೯–೧೯೫೪

**ದಿನ:** ಶ್ರೀ ಜಯಸಂವತ್ಸರದ ಭಾದ್ರಪದ ಬಹುಳ ಅಮಾವಾಸ್ಯೆಯಂದು

✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼✼



ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಅಜ್ಜ ಈಶ್ವರೀ ಸುಬ್ಬಾಶಾಸ್ತ್ರಿಗಳು ಸಕಲ ವೇದಾಂಗ ಪಾರಂಗತರು ಮತ್ತು ಮಹಾನ್ ಜ್ಞಾನಿಗಳಾಗಿದ್ದರು. ಶ್ರೀ ಸುಬ್ಬಾಶಾಸ್ತ್ರಿಗಳು ಸ್ವಲ್ಪ ಕಾಲ ಗುರುಸೇವೆಯಲ್ಲಿ ಮತ್ತು ಶಾರದಾಂಬೆ ಸನ್ನಿಧಿಯಲ್ಲಿ ಇದ್ದು, ನಂತರ ತಪೋನುಷ್ಠಾನಗಳಲ್ಲಿ ಕಳೆಯಲು ಶೃಂಗೇರಿಯಿಂದ ವಾನಪ್ರಸ್ಥಾಶ್ರಮಕ್ಕೆಂದು ಹಿಮಾಲಯದ ಕಡೆಗೆ ಹೊರಟು ಹೋಗಿದ್ದರು.

ಗೋಪಾಲಶಾಸ್ತ್ರಿಗಳು ಇವರ ಏಕೈಕ ಪುತ್ರರು. ಗೋಪಾಲಶಾಸ್ತ್ರಿಗಳ ಪತ್ನಿ ಶ್ರೀಮತಿ ಲಕ್ಷ್ಮಮ್ಮನವರು. ಸದಾ ದೈವ ಚಿಂತನೆಯಲ್ಲೇ ಇರುವ ಈ ದಂಪತಿಗಳಿಗೆ ಇದ್ದ ಒಂದೇ ಒಂದು ಕೊರತೆಯೆಂದರೆ ಮಕ್ಕಳಿಲ್ಲದಿರುವುದು. ಇವರಿಗೆ ಹುಟ್ಟಿದ ಹನ್ನೊಂದು ಮಕ್ಕಳಲ್ಲಿ ಒಂದೂ ಸಹ ಉಳಿಯದೆ ತೀರಿಕೊಂಡಿದ್ದವು. ಶಾಸ್ತ್ರಿಗಳ ಪತ್ನಿಗೆ ಆದ ನೋವು ಹೇಳತೀರದು. ಸ್ವಲ್ಪ ದಿನ ತೀರ್ಥಯಾತ್ರೆ ಮಾಡಿಕೊಂಡು ಬಂದರೆ ತಮ್ಮ ಪತ್ನಿಗೆ ದುಃಖವು ಕಡಿಮೆಯಾಗಬಹುದು ಎಂದು ಶಾಸ್ತ್ರಿಗಳು ಯೋಚಿಸಿ ಪುಣ್ಯಕ್ಷೇತ್ರಗಳಿಗೆ ಹೋಗಿ ಬರುವ ಇಂಗಿತವನ್ನು ಪತ್ನಿಯೊಡನೆ ಪ್ರಸ್ತಾಪಿಸಿದರು. ಇದನ್ನು ಕೇಳಿ ಆಕೆಯೂ ಸಹ ತಕ್ಕಮಟ್ಟಿಗೆ ಉತ್ಸಾಹ ತೋರಿದರು.

ಶಾಸ್ತ್ರಿಗಳು ತೀರ್ಥಯಾತ್ರೆಯನ್ನು ಕೈಗೊಳ್ಳುವ ತೀರ್ಮಾನವನ್ನು ಮಾಡಿದ ನಂತರ ಲಕ್ಷ್ಮಮ್ಮರವರು ಉಲ್ಲಾಸ ಚಿತ್ತರಾದರು. ಪ್ರಯಾಣಕ್ಕೆ ಶುಭ ದಿನವೊಂದನ್ನು ನಿಶ್ಚಯಿಸಿ, ತಮ್ಮ ಗುರುವರ್ಯರಾದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀಗಳವರ ಅಪ್ಪಣೆ ಪಡೆಯಲೆಂದು ಮಠಕ್ಕೆ ಬಂದರು. ತಾವು ತೀರ್ಥಯಾತ್ರೆ ಹೊರಡಬೇಕೆಂದಿರುವ ಉದ್ದೇಶವನ್ನು ಗುರುಗಳಿಗೆ ಹೇಳಿದರು. ಗುರುಗಳು "ನಿಮ್ಮಉದ್ದೇಶ ಶ್ರೀ ಶಾರದಾಂಬೆ ಕೃಪೆಯಿಂದ ಈಡೇರಲಿ" ಎಂದು ಅನುಗ್ರಹಿಸಿದರು. ಶ್ರೀ ಗುರುಗಳ ದರ್ಶನ ಮತ್ತು ಶೃಂಗೇರಿ ಕ್ಷೇತ್ರದ ಎಲ್ಲಾ ದೇವಸ್ಥಾನಗಳ ದರ್ಶನ ಮಾಡಿಕೊಂಡು, ದಂಪತಿಗಳು ತೀರ್ಥಯಾತ್ರೆಗೆ ಪ್ರಯಾಣ ಬೆಳೆಸಿದರು. ಆ ದಿನಗಳಲ್ಲಿ ಪ್ರಯಾಣ ಸೌಲಭ್ಯ ಅಷ್ಟು ಚೆನ್ನಾಗಿ ಇರುತ್ತಿರಲಿಲ್ಲ. ಈಗಿನಂತೆ ಬಸ್ಸುಗಳು ಇರಲಿಲ್ಲ. ಶಾಸ್ತ್ರೀ ದಂಪತಿಗಳು ಹೆಚ್ಚು ಪ್ರಯಾಣವನ್ನು ಕಾಲು ನಡಿಗೆಯಲ್ಲೇ ಮಾಡಿದರು. ಆಗುಂಬೆ, ಉಡುಪಿ, ಗೋಕರ್ಣ ಹೀಗೆ ಸಾಗಿತ್ತು ಅವರ ಪಯಣ. ಎಲ್ಲಾ ತೀರ್ಥಕ್ಷೇತ್ರಗಳಲ್ಲೂ ಭಕ್ತಿಯಿಂದ ದೇವರ ಸೇವೆ ಮಾಡಿದರು. ತಮ್ಮ ಆಕಾಂಕ್ಷೆ ಈಡೇರುವಂತೆ ಕೋರಿಕೊಂಡರು. ದೀರ್ಘಾಯುಷಿಯಾಗುವ ಒಂದು ಮಗುವನ್ನಾದರೂ ಕರುಣಿಸು ಎಂದು ಬೇಡಿಕೊಂಡರು. ಹೊರಡುವ ಮುನ್ನ ಮತ್ತೊಮ್ಮೆ ದೇವರ ದರ್ಶನ ಮಾಡಿಕೊಂಡು ಉಲ್ಲಾಸದಿಂದ ಶೃಂಗೇರಿಗೆ ಪ್ರಯಾಣ ಬೆಳೆಸಿದರು.

ತೀರ್ಥಯಾತ್ರೆಯಿಂದ ಹಿಂತಿರುಗಿ ಬಂದ ಮೇಲೆ ಶಾಸ್ತ್ರಿಗಳ ಪತ್ನಿ ತಮ್ಮ ನೋವನ್ನೆಲ್ಲಾ ಮರೆತರು. ಏನೋ ಒಂದು ರೀತಿ ಸಂತೋಷ ಅವರನ್ನು ಆವರಿಸಿತು. ಕೆಲವು ದಿನಗಳು ಕಳೆದ ಬಳಿಕ ಲಕ್ಷ್ಮಮ್ಮನವರಿಗೆ ಮತ್ತೊಮ್ಮೆ ಮಾತೃತ್ವದ ಯೋಗ ಲಭಿಸುವ ಸೂಚನೆಗಳು ಕಂಡು ಬಂದವು. ಶ್ರೀ ನಂದನ ಸಂವತ್ಸರದ ಆಶ್ವಯುಜ ಬಹುಳ ಏಕಾದಶೀ (೧೬–೧೦–೧೮೯೨) ರವಿವಾರ ಸೂರ್ಯೋದಯದ ನಂತರ ಲಕ್ಷ್ಮಮ್ಮನವರು ಒಬ್ಬ ಅವತಾರ ಪುರುಷನಿಗೆ ತಮ್ಮ ತವರೂರಾದ ಸಕಲೇಶಪುರದಲ್ಲಿ ಜನ್ಮವಿತ್ತರು. ಮಗುವಿಗೆ ಹನ್ನೊಂದನೆಯ ದಿನ ನಾಮಕರಣವನ್ನು ನೆರವೇರಿಸಿ "ನರಸಿಂಹ ಶಾಸ್ತ್ರೀ" ಎಂಬ ಹೆಸರಿನಿಂದ ಕರೆದರು. ಅವರ ಮೂಲ ಸ್ಥಳ ಪಟಗುಪ್ಪೆ ಮತ್ತು ಅವರ ಮನೆತನದ ಹೆಸರು ಈಶ್ವರೀ. ಹೀಗಾಗಿ ಮಗುವಿನ ಹೆಸರು "ಪಟಗುಪ್ಪೆ ಈಶ್ವರೀ ನರಸಿಂಹ ಶಾಸ್ತ್ರೀ" ಎಂದಾಯಿತು. ದೇವರ ಅನುಗ್ರಹದಿಂದ ಜನಿಸಿದ ಆ ಪುತ್ರನನ್ನು ತಾಯಿ ಶ್ರೀ ಶಾರದೆಯ ಸೇವೆಗೆ ಒಪ್ಪಿಸುವುದಾಗಿ, ಆ ತಂದೆ–ತಾಯಿಯರು ಮೊದಲೇ ಹರಸಿಕೊಂಡಿದ್ದರು. ತಮಗೆ ಪುತ್ರ ಜನನವಾದದ್ದನ್ನು ಶಾಸ್ತ್ರಿಗಳು ಗುರುಗಳಲ್ಲಿ ನಿವೇದಿಸಿಕೊಂಡರು ಮತ್ತು ಮಗುವಿಗೆ ತಮ್ಮ ಕುಲ ದೇವರಾದ ಶ್ರೀ ನೃಸಿಂಹಸ್ವಾಮಿಯ ಹೆಸರನ್ನೇ ಇಟ್ಟಿರುವುದಾಗಿ ಹೇಳಿದರು.

ಗುರುವರ್ಯರು, ಶಾಸ್ತ್ರೀ ದಂಪತಿಗಳು ಮತ್ತು ಮಗುವನ್ನು ಹೃತ್ಪೂರ್ವಕವಾಗಿ ಆಶೀರ್ವದಿಸಿದರು. ಆ ಮಗು ಮುಂದೊಂದು ದಿವಸ ಜಗತ್ತೇ ಆರಾಧಿಸುವ ಗುರುವಾಗುತ್ತಾನೆ ಎಂದು ಶ್ರೀ ನೃಸಿಂಹಭಾರತೀ ಸ್ವಾಮಿಗಳು, ಆ ಮಗುವನ್ನು ನೋಡಿದ ಕ್ಷಣವೇ ಗ್ರಹಿಸಿದರು. ತಮ್ಮ

ಕೃಪೆಯನ್ನು ಸಂಪೂರ್ಣವಾಗಿ ಆ ಮಗುವಿನ ಮೇಲೆ ತೋರಲು ನಿರ್ಧರಿಸಿದರು.

ಹನ್ನೊಂದು ಮಕ್ಕಳನ್ನು ಕಳೆದುಕೊಂಡು ಹತಾಶರಾಗಿದ್ದ ದಂಪತಿಗಳು ನರಸಿಂಹನೂ ಎಲ್ಲಿ ತಮ್ಮಿಂದ ದೂರವಾಗುವನೋ ಎಂಬ ಭಯದಿಂದ ತಮ್ಮ ಮನೆಯಲ್ಲಿ ಸಾಕದೆ ಮಠದ ಆಡಳಿತಾಧಿಕಾರಿಯಾಗಿದ್ದ ಶ್ರೀಕಂಠಶಾಸ್ತ್ರಿಗಳ ಮನೆಯಲ್ಲಿ ಬೆಳೆಸಿದರು. ಪುತ್ರ ರತ್ನನನ್ನು ಹೂವಿನಂತೆ ಕಾಪಾಡುತ್ತಾ ಬಂದರು ಆ ದಂಪತಿಗಳು. ಚಿಕ್ಕ ವಯಸ್ಸಿನಲ್ಲಿಯೇ ಎಲ್ಲವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಆ ಮಗುವು ತನ್ನ ತಂದೆ ತಾಯಿಯರಂತೆ ಪೂಜೆ ಮಾಡುವುದು, ಸ್ತೋತ್ರ ಹೇಳಿಕೊಳ್ಳುವುದು, ಹೀಗೆ ತಂದೆ-ತಾಯಿಯರ ಪ್ರತಿಕಾರ್ಯದಲ್ಲೂ ಅವರನ್ನು ಅನುಕರಿಸುತ್ತಾ ಮಗು ಬೆಳೆಯಿತು. ತಂದೆಯೊಡನೆ ಮಠಕ್ಕೂ, ದೇವಸ್ಥಾನಕ್ಕೂ ಹೋಗುವುದು, ಗುರುದರ್ಶನ, ದೇವರ ದರ್ಶನ ಮಾಡಿದಾಗ ಯಾರಿಂದಲೂ ಹೇಳಿಸಿಕೊಳ್ಳದೆ ತಾನಾಗಿಯೇ ಸಾಷ್ಟಾಂಗ ಪ್ರಣಾಮ ಮಾಡುವುದು ಬಾಲಕ ನರಸಿಂಹನಿಗೆ ರೂಢಿಯಾದವು. ಬಾಲ್ಯದಲ್ಲಿಯೇ ಮಹಾನ್ ಸಂಭಾವಿತನಾದನು. ತಂದೆ ತಾಯಿಯಂತೆಯೇ ಯಾರ ತಂಟೆಗೂ ಹೋಗದೆ ಮೃದು ಸ್ವಭಾವದವನಾಗಿ ಬೆಳೆಯತೊಡಗಿದನು. ಐದನೇ ವಯಸ್ಸಿನಲ್ಲಿ ಚೌಲವೂ, ಅಕ್ಷರಾಭ್ಯಾಸವೂ ನಡೆದವು. ಮನೆಯಲ್ಲಿಯೇ ಅಮರವನ್ನು, ಶಬ್ದವನ್ನು ಹೇಳಿಕೊಡುವುದು ಆರಂಭವಾಯಿತು. ಮೊದಲಿನಿಂದಲೂ ಸಂಸ್ಕೃತ ಶ್ಲೋಕಗಳನ್ನು ಬಲು ಬೇಗ ಕಲಿಯುತ್ತಿದ್ದ ಬಾಲಕನು ಅಮರವನ್ನು, ಶಬ್ದಗಳನ್ನು ಅತ್ಯಲ್ಪ ಕಾಲದಲ್ಲಿಯೇ ಕಲಿತನು. ಶಾಲೆಯಲ್ಲಿಯೂ ಅಷ್ಟೇ, ಉಪಾಧ್ಯಾಯರಿಗೆ ಈ ಬಾಲಕನ ಹರಿತವಾದ ಬುದ್ಧಿ, ವಿದ್ಯಾಭ್ಯಾಸಗಳಲ್ಲಿ ಆಸಕ್ತಿ, ಅವನ ಚಟುವಟಿಕೆ ಎಲ್ಲವೂ ಅತ್ಯಂತ ಮೆಚ್ಚುಗೆಯಾಗಿದ್ದವು. ಹೀಗೆ ಮನೆಯಲ್ಲಿ ಸಂಸ್ಕೃತ ಭಾಷಾಭ್ಯಾಸ ಪ್ರಾರಂಭವಾಗಿದ್ದುದಲ್ಲದೆ ಶಾಲೆಯಲ್ಲಿ ಕನ್ನಡ, ಇಂಗ್ಲೀಷ್ ವಿದ್ಯಾಭ್ಯಾಸವನ್ನು ಸಹ ಕಲಿಯತೊಡಗಿದನು.

ನರಸಿಂಹನ ಏಳಿಗೆಯಲ್ಲಿ ಬಹಳ ಆಶೋತ್ತರಗಳನ್ನು ಹೊಂದಿದ್ದ ಗುರುವರ್ಯರು ಶ್ರೀ ಜಗದಂಬೆಯನ್ನು ಕುರಿತು "ಸರ್ವಜ್ಞಂ ಶ್ರೀ ನೃಸಿಂಹಂ ಕುರು ಶಿವದಯಿತೇ" ಎಂದು ಪ್ರಾರ್ಥಿಸುತ್ತಿದ್ದರು. ಎಂಟನೆಯ ವಯಸ್ಸಿನಲ್ಲಿಯೇ ಉಪನೀತನಾಗಿದ್ದ ನರಸಿಂಹನು ತನ್ನ ದೈನಂದಿನ ಕಾರ್ಯಗಳೊಡನೆ ತ್ರಿಕಾಲ ಸಂಧ್ಯಾವಂದನೆ, ಅಗ್ನಿಕಾರ್ಯಗಳನ್ನೂ ಬಿಡದೆ ನಡೆಸುತ್ತಿದ್ದನು. ಮುಂದೆ ಸದ್ವಿದ್ಯಾ ಸಂಜೀವಿನೀ ವೇದ ಪಾಠ ಶಾಲೆಯನ್ನು ಸೇರಿದನು. ಇತ್ತ ಆಂಗ್ಲ ವಿದ್ಯಾಭ್ಯಾಸವಾಗುತ್ತಿದ್ದ ಮಧ್ಯಮ ಶಾಲೆಯಲ್ಲೂ ಅತ್ತ ಸದ್ವಿದ್ಯಾ ಸಂಜೀವಿನೀ ಪಾಠಶಾಲೆಯಲ್ಲೂ ನರಸಿಂಹನು ತನ್ನ ಉಪಾಧ್ಯಾಯರುಗಳಿಗೆ ಅಚ್ಚುಮೆಚ್ಚಾದನು. ಎರಡೂ ಶಾಲೆಗಳಲ್ಲಿಯೂ ನಡೆಯುತ್ತಿದ್ದ ಪರೀಕ್ಷೆಗಳಲ್ಲಿ ಮೊದಲನೆಯವನಾಗಿ ತೇರ್ಗಡೆ ಹೊಂದುತ್ತಿದ್ದನು. ತಮ್ಮ ಮಗ ಶಾಲೆಯಲ್ಲಿಯೇ ಪ್ರಥಮನಾಗಿ ಹೊರಹೊಮ್ಮಿದ್ದರಿಂದ ತಾಯಿ ಲಕ್ಷ್ಮಮ್ಮರವರಿಗೆ ಸಹಜವಾಗಿ ಬಹಳ ಸಂತೋಷವಾಯಿತು. ಮುಂದೆ ಇದೇ ರೀತಿ ಓದಿದರೆ

ಒಳ್ಳೆ ಅಧಿಕಾರಿಯಾಗಬಹುದು ಎಂದು ಲಕ್ಷ್ಮಮ್ಮನವರು ಅಭಿಪ್ರಾಯಪಟ್ಟುಕೊಂಡಿದ್ದರು. ಅದಕ್ಕಾಗಿ ಆಂಗ್ಲ ಮಾಧ್ಯಮವೇ ಸರಿ ಎಂದು ತೀರ್ಮಾನಿಸಿದ್ದರು. ಈ ವಿಷಯವಾಗಿ ಆಕೆ ಪತಿಯೊಡನೆ ಅನೇಕ ಸಾರಿ ತನ್ನ ಕನಸನ್ನು ಹಂಚಿಕೊಂಡಿದ್ದರು. ತಾಳ್ಮೆಯ ಪ್ರತಿರೂಪದಂತಿದ್ದ ಶಾಸ್ತ್ರಿಗಳು ಶೀಘ್ರವಾಗಿ ಯಾವ ನಿರ್ಧಾರಕ್ಕೂ ಬರಲಿಲ್ಲ.

ಮಗನ ಪ್ರತಿಯೊಂದು ವಿಷಯದಲ್ಲೂ ಗುರುಗಳನ್ನೇ ಆಶ್ರಯಿಸುತ್ತಿದ್ದ ಶಾಸ್ತ್ರಿಗಳು ಈಗಲೂ ಸಹ ಗುರುವರ್ಯರ ಮನಸ್ಸಿನಲ್ಲಿ ಏನಿದೆ ಎಂದು ತಿಳಿದು ಮುಂದಿನ ನಿರ್ಧಾರ ಕೈಗೊಳ್ಳಲು ತೀರ್ಮಾನಿಸಿ ನಿಧಾನವಾಗಿ ನರಸಿಂಹವನದತ್ತ ನಡೆದರು ಗುರುಗಳ ದರ್ಶನಕ್ಕಾಗಿ. ಮನಸ್ಸಿನಲ್ಲಿ ತಮ್ಮ ಪತ್ನಿ ಕೈಗೊಂಡಿದ್ದ ನಿರ್ಧಾರವನ್ನು ಗುರುಗಳ ಮುಂದೆ ಹೇಳಿದರು. ಅದಕ್ಕೆ ಗುರುಗಳು "ನಿಮ್ಮ ನರಸಿಂಹನಿಗೆ ಆಂಗ್ಲ ವಿದ್ಯಾಭ್ಯಾಸ ಬೇಡ. ಅವನ ಮಾರ್ಗ ಬೇರೆ. ಅವನಿಗೆ ಕೊಡಿಸಬೇಕಾದದ್ದು ಧಾರ್ಮಿಕ ಶಿಕ್ಷಣ. ಅವನಿಗೆ ವೈದಿಕ ವಿದ್ಯೆಯನ್ನೇ ಕೊಡಿಸಿ" ಎಂದು ಆಶೀರ್ವಾದ ವಾಣಿಯಲ್ಲಿ ಗುರುಗಳು ಆಣತಿಯಿತ್ತರು. ಶಾಸ್ತ್ರಿಗಳು ನಮ್ರತೆಯಿಂದ ತಲೆಬಾಗಿ "ತಮ್ಮ ಅಪ್ಪಣೆಯನ್ನು ಶಿರಸಾ ವಹಿಸುತ್ತೇನೆ. ಅವನು ತನ್ನೆಲ್ಲಾ ಶಕ್ತಿಯನ್ನೂ ವೇದ ವಿದ್ಯಾಭ್ಯಾಸಕ್ಕೆ ವಿನಿಯೋಗಿಸಬಹುದು" ಎಂದರು. "ಅದು ನಮ್ಮ ಅಪ್ಪಣೆಯಲ್ಲ, ಶಾರದಾಂಬೆಯ ಅಪ್ಪಣೆ" ಎಂದು ಗುರುವರ್ಯರು ನುಡಿದು ಶಾಸ್ತ್ರಿಗಳನ್ನು ಕಳಿಸಿಕೊಟ್ಟರು.

ಗುರುವರ್ಯರ ಅಭಿಪ್ರಾಯದಂತೆ ಗೋಪಾಲ ಶಾಸ್ತ್ರಿಗಳು ಬಾಲಕನನ್ನು ಸದ್ವಿದ್ಯಾ ಸಂಜೀವಿನೀ ಪಾಠಶಾಲೆಗೆ ಸೇರಿಸಿದರು. ಗೀರ್ವಾಣ ವಿದ್ಯೆಯಲ್ಲಿ ಹೆಚ್ಚು ಹೆಚ್ಚು ಆಸಕ್ತಿಯಿಂದ ಅಭ್ಯಾಸ ನಡೆಸುತ್ತಾ ನರಸಿಂಹನು ಒಂದೊಂದೇ ಮೆಟ್ಟಿಲನ್ನು ಮೇಲೇರುತ್ತಾ ಬಂದನು. ಗೀರ್ವಾಣ ವಿದ್ಯೆಯಲ್ಲಿನ ಆಸಕ್ತಿ ಸ್ವಾಭಾವಿಕವಾಗಿ ಅವನನ್ನು ಅಧ್ಯಾತ್ಮ ಚಿಂತನೆಯಲ್ಲಿ ಮುಳುಗಿಸಿತು. ಅದರ ಪ್ರಭಾವದಿಂದ ಬಾಲಕನು ಹೆಚ್ಚು ಹೆಚ್ಚು ಮೌನಿಯಾಗುತ್ತ ಬಂದನು. ಬಾಲ್ಯದಿಂದಲೂ ಪಾರಮಾರ್ಥಿಕ ವಿಷಯಗಳತ್ತ ಹರಿಯುತ್ತಿದ್ದ ಮನಸ್ಸು ಈಗ ಜ್ಞಾನ ಸಾಗರದತ್ತ ಧಾವಿಸುತ್ತಿತ್ತು. ವಿದ್ಯೆಯೊಡನೆ ವಿನಯವೂ, ವಿನಯದೊಡನೆ ಶೀಲವೂ, ಶೀಲದೊಡನೆ ಸಾತ್ವಿಕತೆಯೂ ಬೆಳೆಯುತ್ತ ಬಂದವು. ಗುರು ಹಿರಿಯರಲ್ಲಿ ಗೌರವಾದರ, ಬಡವರಲ್ಲಿ ಅನುಕಂಪ, ಕರುಣೆ ಬೆಳೆದು ಬಂದವು.

ನರಸಿಂಹನು ಪಾಠಶಾಲೆಯಲ್ಲಿ ಇನ್ನೂ ಆರಂಭದ ವಿದ್ಯಾರ್ಥಿಯಾಗಿದ್ದ ಸಂದರ್ಭದಲ್ಲಿ ಒಮ್ಮೆ, ಶ್ರೀ ನೃಸಿಂಹಭಾರತೀ ಸ್ವಾಮಿಗಳು ತಮ್ಮ ಮಠದಲ್ಲಿದ್ದ ಪಂಡಿತರಿಗೆಲ್ಲ ಶ್ಲೋಕವೊಂದರ ಕೊನೆಯ ಚರಣವನ್ನು ಕೊಟ್ಟು, ತಾವು ಸಂಚಾರದಿಂದ ಹಿಂದಿರುಗಿ ಬರುವುದರಲ್ಲಿ ಶ್ಲೋಕವನ್ನು ಪೂರ್ಣಗೊಳಿಸಲು ಅಪ್ಪಣೆ ಕೊಡಿಸಿದ್ದರು. ಆ ಸಮಯದಲ್ಲಿ ಅಲ್ಲಿಯೇ ಇದ್ದ ಬಾಲಕ ನರಸಿಂಹನು ಆ ಸಮಸ್ಯೆಯನ್ನು ಕೇಳಿದ್ದನು. ಸ್ವಲ್ಪ ದಿನಗಳ ಬಳಿಕ ಗುರುಗಳು ಮಾರ್ಗ ಮಧ್ಯದ ಹಳ್ಳಿಯೊಂದರಲ್ಲಿ ಬಂದು ನೆಲೆಸಿದ್ದರು. ಬಾಲಕ ನರಸಿಂಹನು

ಆ ಸಮಸ್ಯೆಯನ್ನು ಬಿಡಿಸಿದ್ದು, ಗುರುಗಳಲ್ಲಿ ತನ್ನ ಉತ್ತರವನ್ನು ನಿವೇದಿಸಿಕೊಳ್ಳಲು ಅವರು ತಂಗಿದ್ದ ಗ್ರಾಮಕ್ಕೆ ಬಂದನು. ಗುರುಗಳಿಗೆ ಸಾಷ್ಟಾಂಗವೆರಗಿ ತಾನು ಸಮಸ್ಯೆಯನ್ನು ಪೂರ್ಣ ಮಾಡಿರುವುದಾಗಿ ಬಿನ್ನವಿಸಿದನು. ಹಾಗು ತಾನು ಸಿದ್ಧಪಡಿಸಿದ ಉತ್ತರವನ್ನು ವಿವರಿಸಿದನು. ಹಿರಿಯ ಪಂಡಿತರುಗಳೇ ಬಿಡಿಸಲಾಗದಿದ್ದ ಸಮಸ್ಯೆಯನ್ನು ಆ ಬಾಲಕನು ಅತ್ಯಂತ ಸರಳವಾಗಿ ಬಿಡಿಸಿ ವಿವರಿಸಿದ್ದನ್ನು ಕೇಳಿದ ಸಭಿಕರೆಲ್ಲರಿಗೂ ಆಶ್ಚರ್ಯವಾಯಿತು. ಗುರುಗಳಂತೂ ಈ ನರಸಿಂಹನನ್ನು ಬಹಳವಾಗಿ ಮೆಚ್ಚಿಕೊಂಡರು.

ಶ್ರೀ ನೃಸಿಂಹಭಾರತೀ ಸ್ವಾಮಿಗಳು, ವಿದ್ಯಾಭ್ಯಾಸದಲ್ಲಿ ನರಸಿಂಹನ ಪ್ರಗತಿಯನ್ನು ತಿಳಿದುಕೊಳ್ಳಲು ಉಪಾಧ್ಯಾಯರಿಂದ ವರದಿಯನ್ನು ತರಿಸಿಕೊಳ್ಳುತ್ತಿದ್ದರು. ಪರೀಕ್ಷೆಯಲ್ಲಿ ವಿದ್ಯಾರ್ಥಿಗಳು ಬರೆದ ಉತ್ತರ ಪತ್ರಿಕೆಗಳನ್ನು ತಾವೇ ಸ್ವತಃ ಪರಿಶೀಲಿಸುತ್ತಿದ್ದರು. ನರಸಿಂಹನ ಉತ್ತರ ಪತ್ರಿಕೆಗಳು ತೃಪ್ತಿಯನ್ನೂ, ಪರಮ ಸಂತೋಷವನ್ನೂ ಉಂಟುಮಾಡುತ್ತಿದ್ದವು. "ಸರ್ವಜ್ಞಂ ಶ್ರೀ ನೃಸಿಂಹಂ ಕುರು ಶಿವದಯಿತೇ" ಎಂದು ಜಗನ್ಮಾತೆಯನ್ನು ಪ್ರಾರ್ಥಿಸುತ್ತಿದ್ದ ಗುರುಗಳು, ನರಸಿಂಹನು ಅದೇ ರೀತಿ ಬೆಳೆಯುತ್ತಿರುವುದನ್ನು ಕಂಡು ಬಹಳ ಸಂತೋಷಗೊಂಡರು. ಶ್ರೀ ನೃಸಿಂಹ ಭಾರತೀ ಸ್ವಾಮಿಗಳು ದಕ್ಷಿಣ ಸಂಚಾರದಿಂದ ಹಿಂತಿರುಗುವಾಗ ಬೆಂಗಳೂರಿನಲ್ಲಿ ಕೆಲ ಕಾಲ ತಂಗಿದ್ದರು. ೧೯೦೭ ನೇ ಇಸವಿಯಲ್ಲಿ ಅಲ್ಲಿ ಶ್ರೀಮಠವು ಸ್ಥಾಪಿಸಲ್ಪಟ್ಟಿತು. ಅದೇ ಮಠದಲ್ಲಿ ವೇದಾಂತ ಶಾಸ್ತ್ರದಲ್ಲಿ ಪ್ರೌಢ ವಿದ್ಯಾಭ್ಯಾಸಕ್ಕಾಗಿ ಒಂದು ಮಹಾ ಪಾಠಶಾಲೆಯನ್ನು ಸ್ಥಾಪಿಸುವ ಸಂಕಲ್ಪದಿಂದ ೧೯೧೧ ನೇ ಇಸವಿಯಲ್ಲಿ "ಗೀರ್ವಾಣ ಪ್ರೌಢವಿದ್ಯಾಭಿವರ್ಧಿನೀ ಪಾಠಶಾಲಾ" ಎಂಬ ಅಭಿಧಾನದಿಂದ ಪ್ರಾರಂಭವಾಯಿತು.

ಗುರುವರ್ಯರು, ತರ್ಕಶಾಸ್ತ್ರವನ್ನು ಪೂರೈಸಿದ್ದ ನರಸಿಂಹಶಾಸ್ತ್ರಿಯನ್ನು ಪೂರ್ವಮೀಮಾಂಸಾ ಶಾಸ್ತ್ರಾಧ್ಯಯನಕ್ಕೆ ಕಳುಹಿಸುವ ಯೋಚನೆ ಮಾಡಿದ್ದರು. ಅವನನ್ನು ಬೆಂಗಳೂರಿಗೆ ಕಳುಹಿಸುವ ಏರ್ಪಾಡು ಮಾಡಲು ಧರ್ಮಾಧಿಕಾರಿಯಾಗಿದ್ದ ಶ್ರೀಕಂಠಶಾಸ್ತ್ರಿಗಳಿಗೆ ಸೂಚನೆ ಇತ್ತರು. ಶ್ರೀಕಂಠಶಾಸ್ತ್ರಿಗಳಿಂದ ಗೋಪಾಲಶಾಸ್ತ್ರಿಗಳಿಗೆ ಕರೆಬಂತು. ಶ್ರೀ ಗುರುಗಳ ಇಚ್ಛೆಯನ್ನು ಶ್ರೀಕಂಠಶಾಸ್ತ್ರಿಗಳಿಂದ ಗೋಪಾಲಶಾಸ್ತ್ರಿಗಳು ಅರಿತರು. ತಮ್ಮ ಬಾಲಕನಲ್ಲಿ ಮೊದಲಿನಿಂದಲೂ ಅಭಿಮಾನ ಆಸಕ್ತಿಗಳನ್ನು ತಳೆದಿದ್ದ ಗುರುಗಳ ಈ ಆದೇಶದಿಂದ ಗೋಪಾಲ ಶಾಸ್ತ್ರಿಗಳಿಗೆ ಅತ್ಯಂತ ಸಂತೋಷವಾದರೂ, ಬಾಲಕನೊಬ್ಬನನ್ನೇ ಬೆಂಗಳೂರಿಗೆ ಕಳುಹಿಸುವುದು ಸ್ವಲ್ಪ ಚಿಂತೆಗೀಡುಮಾಡಿತ್ತು. ದೈವೇಚ್ಛೆ ಇದ್ದಂತಾಗಲಿ ಎಂದು ತೀರ್ಮಾನಿಸಿ ಗುರುಗಳ ದರ್ಶನಕ್ಕೆ ಹೋದರು. ಗುರುಗಳು ಗೋಪಾಲಶಾಸ್ತ್ರಿಗಳನ್ನು ಕರೆಸಿದರು. "ಶಾಸ್ತ್ರಿಗಳೇ ನರಸಿಂಹನು ತರ್ಕಶಾಸ್ತ್ರಾಭ್ಯಾಸವನ್ನು ಪೂರೈಸಿದ್ದಾನೆ. ಮುಂದಿನ ಆಲೋಚನೆಯನ್ನೇನು ಮಾಡಿದ್ದೀರಿ?" ಎಂದು ಕೇಳಿದರು. ಶಾಸ್ತ್ರಿಗಳು "ಮುಂದಿನ

ವಿದ್ಯಾಭ್ಯಾಸದ ಕುರಿತು ಇಲ್ಲಿಯವರೆಗೆ ಆಲೋಚನೆಯನ್ನೇ ಮಾಡಿರಲಿಲ್ಲ. ಆದರೆ ಸ್ವಲ್ಪ ಕಾಲದ ಮೊದಲು ಶ್ರೀಕಂಠಶಾಸ್ತ್ರಿಗಳು ಬೆಂಗಳೂರಿನ ಮಹಾಪಾಠಶಾಲೆಗೆ ಮಗನನ್ನು ಕಳುಹಿಸಬೇಕೆಂಬ ಆಣತಿಯನ್ನು ತಿಳಿಸಿದರು" ಎಂದು ನಮ್ರವಾಗಿ ನುಡಿದರು. "ಹೌದು, ಅದೇ ನಮ್ಮ ಅಭಿಲಾಷೆ. ನರಸಿಂಹನ ಪ್ರಗತಿ, ಶ್ರೇಯಸ್ಸು ಎಲ್ಲವನ್ನೂ ಆಲೋಚಿಸಿಯೇ ನಾವು ಈ ನಿರ್ಧಾರಕ್ಕೆ ಬಂದಿದ್ದೇವೆ. ಆದರೆ ತಂದೆ, ತಾಯಿಯರ ಒಪ್ಪಿಗೆಯಿಲ್ಲದೆ ಅಲ್ಲಿಗೆ ಕಳುಹಿಸಲು ಸಾಧ್ಯವಿಲ್ಲವಾದ್ದರಿಂದ ತಮ್ಮ ಅಭಿಪ್ರಾಯ ಕೇಳಲು ಕರೆಸಿದ್ದೇವೆ" ಎಂದು ಗುರುವರ್ಯರು ನುಡಿದರು.

"ತಮ್ಮ ಮಹದಾಜ್ಞೆಯನ್ನು ಪರಿಪಾಲಿಸುವುದೇ ನಮಗೂ, ನರಸಿಂಹನಿಗೂ ಶ್ರೇಯಸ್ಕರವೆಂದು ನಂಬಿದವರು ನಾವು. ಆದರೆ ಒಂದೇ ಒಂದು ಯೋಚನೆಯಿಂದ ನಾವು ಚಿಂತೆಗೀಡಾಗಿದ್ದೇವೆ. ಬಾಲಕನು ನಮ್ಮ ಕಣ್ಮುಂದಿನಿಂದ ದೂರ ಹೋದರೆ ಹೇಗೋ ಏನೋ ಎಂಬ ಚಿಂತೆ ನಮಗಾಗಿದೆ" ಎಂದು ಕಳಕಳಿಯಿಂದ ನುಡಿದರು. ಅದಕ್ಕೆ ಗುರುಗಳು "ಅದನ್ನು ಕುರಿತು ಯೋಚಿಸುವ ಅಗತ್ಯವೇ ಇಲ್ಲ. ನರಸಿಂಹನಿದ್ದಲ್ಲಿ ನೀವು, ನೀವು ಇದ್ದಲ್ಲಿ ನರಸಿಂಹನು ಇರಬೇಕೆಂದು ತಾನೇ ನಿಮ್ಮ ಬಿನ್ನಹ? ನರಸಿಂಹನನ್ನು ಬೆಂಗಳೂರಿನ ಪಾಠಶಾಲೆಗೆ ಸೇರಿಸುವುದನ್ನು ನಿರ್ಧರಿಸಿದ ಬಳಿಕ, ನೀವು ಬೆಂಗಳೂರಿನಲ್ಲಿರುವ ವಿಷಯವೂ ನಿರ್ಧರಿಸಲ್ಪಟ್ಟಂತೆಯೇ ಅಲ್ಲವೇ? ಅದಕ್ಕೆ ಯೋಚನೆಯೇಕೆ?" ಎಂದು ಹೇಳಿದರು. ಇದನ್ನು ಕೇಳಿದ ಶಾಸ್ತ್ರಿಗಳು ಪುಳಕಿತಗೊಂಡರು. ತಮ್ಮ ಪತ್ನಿಗೆ ಈ ವಿಷಯವನ್ನು ಹೇಳಿದರು, ಆಕೆಯೂ ನೆಮ್ಮದಿಯ ನಿಟ್ಟುಸಿರು ಬಿಟ್ಟರು. ಒಂದು ಶುಭ ದಿನ ಗುರುಗಳ ಆಶೀರ್ವಾದವನ್ನು ಪಡೆದು ಮಗನೊಡನೆ ತಂದೆ-ತಾಯಿಯರು ಬೆಂಗಳೂರಿಗೆ ಪ್ರಯಾಣ ಬೆಳೆಸಿದರು.

ಪಾಠಶಾಲೆಯ ಹತ್ತಿರದಲ್ಲೇ ಮನೆ ಇದ್ದದ್ದರಿಂದ, ಪಾಠಶಾಲೆ ಬಿಟ್ಟರೆ ಮನೆ, ಮನೆ ಬಿಟ್ಟರೆ ಪಾಠಶಾಲೆ. ಇದನ್ನು ಬಿಟ್ಟರೆ ಪಾಠಶಾಲೆಯ ಆವರಣದಲ್ಲೇ ಯಾವುದಾದರೂ ಮರದ ಕೆಳಗೆ ಅಥವಾ ಗವಿ ಗಂಗಾಧರೇಶ್ವರ ದೇವಸ್ಥಾನದ ಆವರಣ, ನರಸಿಂಹನ ವ್ಯಾಸಂಗ ಸ್ಥಳವಾಯಿತು. ಮಹಾಮಹೋಪಾಧ್ಯಾಯ ವೈದ್ಯನಾಥಶಾಸ್ತ್ರಿಗಳವರು ಪೂರ್ವ ಮೀಮಾಂಸಾ ಶಾಸ್ತ್ರಕ್ಕೂ, ಮಹಾಮಹೋಪಾಧ್ಯಾಯ ವೆಳ್ಳೂರು ಸುಬ್ರಹ್ಮಣ್ಯ ಶಾಸ್ತ್ರಿಗಳು ಉತ್ತರ ಮೀಮಾಂಸಾ ಶಾಸ್ತ್ರಕ್ಕೂ ಪ್ರಾಧ್ಯಾಪಕರಾಗಿದ್ದರು. ಶ್ರೀ ಗುರುವರ್ಯರಿಗೆ ಆಗಾಗ ನರಸಿಂಹನ ಯೋಗಕ್ಷೇಮ ವಿದ್ಯಾಪ್ರಗತಿ ಇವುಗಳ ವಿಷಯವಾಗಿ ವರದಿಹೋಗುತ್ತಿತ್ತು. ಶ್ರೀ ಗುರುವರ್ಯರು ತಮ್ಮ ಶಿಷ್ಯನ ಅಭ್ಯುದಯವನ್ನು ಕೇಳಿ ತೃಪ್ತಿ ಸಮಾಧಾನಗಳನ್ನು ಹೊಂದುತ್ತಿದ್ದರು.

೧೯೧೧ರಲ್ಲಿ ತಮ್ಮ ದಕ್ಷಿಣದೇಶ ಸಂಚಾರದಿಂದ ಹಿಂದಿರುಗಿದ ಮೇಲೆ ಶ್ರೀ ನೃಸಿಂಹ ಭಾರತೀ ಸ್ವಾಮಿಗಳವರ ದೇಹಾರೋಗ್ಯವು ಕ್ಷೀಣಿಸಲು ಆರಂಭವಾಯಿತು. ಸಂಚಾರದ ಕೊನೆಯಲ್ಲಿ ಗುರುಗಳು ನಂದಿಬೆಟ್ಟಕ್ಕೆ ಆಗಮಿಸಿದರು. ಅಲ್ಲಿ ಅವರ ದೇಹಾರೋಗ್ಯ ಇನ್ನು ಹದಗೆಟ್ಟಿತು.

ಆದರೆ ಔಷಧಿ ಪಥ್ಯಗಳನ್ನು ಸ್ವೀಕರಿಸಲು ನಿರಾಕರಿಸಿಬಿಟ್ಟರು. ೧೯೧೨ರ ವೇಳೆಗೆ ವ್ಯಾಧಿಯು ಪ್ರಬಲವಾಯಿತು. ಇನ್ನು ಶರೀರವನ್ನು ಕಳಚಿಹಾಕಿ ಸ್ವತಂತ್ರರಾಗಬೇಕೆಂದು ಗುರುಗಳಿಗೆ ಪದೇ ಪದೇ ಪ್ರೇರಣೆಯಾಗುತ್ತಿತ್ತು. ಶ್ರೀ ಗುರುವರ್ಯರು ಉದ್ದೇಶಿಸಿದ್ದ ಕಾರ್ಯಗಳೆಲ್ಲವೂ ಸಾಂಗವಾಗಿ ನೆರವೇರಿದ್ದವು. ಶೃಂಗೇರಿಯಲ್ಲಿಯೂ, ಬೆಂಗಳೂರಿನಲ್ಲಿಯೂ ಸಂಸ್ಕೃತ ಪಾಠಶಾಲೆಗಳನ್ನು ಆರಂಭಿಸಿದ್ದುದು, ಶ್ರೀ ಶಂಕರ ಜಯಂತ್ಯುತ್ಸವವನ್ನು ಪ್ರತಿವರ್ಷವೂ ನಡೆಸುವಂತೆ ವ್ಯವಸ್ಥೆ ಮಾಡಿದುದು, ಕಾಲಟಿ ಕ್ಷೇತ್ರವನ್ನು ಪರಿಷ್ಕರಿಸಿ ಅಲ್ಲಿ ಶ್ರೀಶಂಕರ ಮಠವನ್ನು ಸ್ಥಾಪಿಸಿದುದು ಹೀಗೆ ತಾವು ಸಂಕಲ್ಪಿಸಿದ್ದ ಕಾರ್ಯಗಳೆಲ್ಲವೂ ತೃಪ್ತಿಕರವಾಗಿ ನೆರವೇರಿದ್ದವು.

ತಮ್ಮ ಕಟ್ಟಕಡೆಯ ಜವಾಬ್ದಾರಿಯಾದ ಶಿಷ್ಯ ಪರಿಗ್ರಹಣವನ್ನು ಆದಷ್ಟು ಬೇಗ ಮಾಡಿ ಮುಗಿಸಲು ನಿರ್ಧರಿಸಿದರು. ಯಾರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಬೇಕೆಂದು ಮೊದಲೇ ತಮ್ಮ ಮನದಲ್ಲಿ ನಿರ್ಧರಿಸಿದ್ದರು. ಶ್ರೀಕಂಠಶಾಸ್ತ್ರಿಗಳಿಗೆ ಬರಲು ಹೇಳಿ ಕಳುಹಿಸಿದರು. ಶಿಷ್ಯ ಪರಿಗ್ರಹಣ ಮಾಡಿ ಅವರಿಗೆ ಸಂಪೂರ್ಣ ಭಾರವನ್ನು ವಹಿಸಿ ತಾವು ಆ ಸಂಬಂಧದಿಂದ ನಿವೃತ್ತರಾಗಬೇಕೆಂಬ ಅಭಿಪ್ರಾಯವಿದೆಯೆಂದು ತಿಳಿಸಿದರು. ತಮ್ಮ ಸ್ಥಾನಕ್ಕೆ ಬರಲು ಅರ್ಹರೆಂದು ಹಲವಾರು ವರ್ಷಗಳಿಂದ ತಮ್ಮ ಹೃದಯದಲ್ಲೇ ತೀರ್ಮಾನಿಸಿಕೊಂಡಿದ್ದ ಶ್ರೀ ನರಸಿಂಹಶಾಸ್ತ್ರಿಗಳಿಗೆ ಸನ್ಯಾಸಾಶ್ರಮವನ್ನು ಕೊಡಿಸಿ ಅವರನ್ನೇ ತಮ್ಮ ಸ್ಥಾನಕ್ಕೆ ಉತ್ತರಾಧಿಕಾರಿಯನ್ನಾಗಿಸಲು ನಿರ್ಧರಿಸಿರುವುದಾಗಿ ನುಡಿದರು. ಗುರುಗಳ ಇಚ್ಛೆಯಂತೆ ಉತ್ತರಾಧಿಕಾರಿಯ ವಿಚಾರವಾಗಿ ಗುರುಗಳ ನಿರ್ಧಾರವನ್ನು ಮೈಸೂರಿನ ಮಹಾರಾಜರೂ, ಗುರುಭಕ್ತರು ಆಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ರವರಿಗೆ ತಿಳಿಸಿ ನರಸಿಂಹ ಶಾಸ್ತ್ರಿಗಳನ್ನು ಬೆಂಗಳೂರಿನಿಂದ ಶೃಂಗೇರಿಗೆ ಕರೆದುಕೊಂಡು ಬರಲು, ಕುಣಿಗಲ್ ರಾಮಾಶಾಸ್ತ್ರಿಗಳನ್ನು ಕಳುಹಿಸಲಾಯಿತು. ಮಹಾರಾಜರು ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ನಡೆಸಿಕೊಡಲು ಸಿದ್ಧರಾಗಿರುವುದಾಗಿ ವರ್ತಮಾನ ಕಳುಹಿಸಿದರು.

ಗುರುವರ್ಯರ ಅರೋಗ್ಯ ದಿನದಿಂದ ದಿನಕ್ಕೆ ಹದಗೆಡುತ್ತಾ ಬಂತು. ಬೆಂಗಳೂರಿನಿಂದ ನರಸಿಂಹಶಾಸ್ತ್ರಿಗಳು ಬರುವುದರೊಳಗೆ ಗುರುವರ್ಯರು ಮುಕ್ತರಾಗಬಹುದೆಂಬ ಶಂಕೆ ಎಲ್ಲರಲ್ಲಿಯೂ ಮೂಡಿತು. ರಾಮಾಶಾಸ್ತ್ರಿಗಳು ಬೆಂಗಳೂರಿನಲ್ಲಿದ್ದ ಗೋಪಾಲಶಾಸ್ತ್ರಿಗಳಲ್ಲಿಗೆ ಬಂದರು. ಗುರುಗಳು ಅಸ್ವಸ್ಥರಾಗಿರುವ ವಿಷಯವನ್ನು ತಿಳಿಸಿ ಅದಕ್ಕಾಗಿ ಗೋಪಾಲಶಾಸ್ತ್ರಿಗಳೂ, ಶ್ರೀ ನರಸಿಂಹಶಾಸ್ತ್ರಿಗಳೂ ಮತ್ತು ಲಕ್ಷ್ಮಮ್ಮನವರು ಸಹ ಪ್ರಯಾಣ ಹೊರಟು ಶೃಂಗೇರಿಗೆ ಬರಬೇಕೆಂದು ತಿಳಿಸಿದರು. ಗುರುಗಳು ಅನಾರೋಗ್ಯದಿಂದಿರುವುದನ್ನು ಕೇಳಿದ ಗೋಪಾಲಶಾಸ್ತ್ರಿಗಳ ಬಾಯಿಯಿಂದ ಮಾತೇ ಹೊರಡಲಿಲ್ಲ. ರಾಮಾಶಾಸ್ತ್ರಿಗಳು ಮುಂದುವರಿಸುತ್ತಾ, "ಶಾಸ್ತ್ರಿಗಳೇ ತಾವು ಅತ್ಯಂತ ಪುಣ್ಯಶಾಲಿಗಳು. ಶ್ರೀ ನೃಸಿಂಹಭಾರತೀ ಸ್ವಾಮಿಗಳವರಿಂದ ಆಶ್ರಮ ದೀಕ್ಷೆಯನ್ನು ಪಡೆದು

ದಕ್ಷಿಣಾಮ್ನಾಯ ಪೀಠಕ್ಕೆ ಆಚಾರ್ಯರಾಗುವ ಮಹಾಪುರುಷನ ಮಾತಾಪಿತರಾದ ತಾವು ಧನ್ಯರು ಎಂದರು. ಇದನ್ನು ಕೇಳಿದ ಗೋಪಾಲಶಾಸ್ತ್ರಿಗಳು ಕ್ಷಣ ಕಾಲ ದಂಗಾದರು. ತಮ್ಮ ಏಕಮಾತ್ರ ಪುತ್ರ ಸರ್ವಸಂಗ ಪರಿತ್ಯಾಗಿಯಾಗಿ ಸನ್ಯಾಸಿಯಾಗುವುದೇ? ಎಂದು ಲಕ್ಷ್ಮಮ್ಮನವರು ಬಿಕ್ಕಿದರು. ಗೋಪಾಲಶಾಸ್ತ್ರಿಗಳು ಅತ್ಯಂತ ಕಷ್ಟದಿಂದ ತಮ್ಮ ದುಃಖವನ್ನು ತಡೆದುಕೊಂಡರು. ಆದರೆ ಗೋಪಾಲಶಾಸ್ತ್ರಿಗಳು ಎಷ್ಟು ವಿಧವಾಗಿ ಹೇಳಿದರೂ ಆ ತಾಯಿ ತಮ್ಮ ಮಗನನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಹೆತ್ತ ಕರುಳಿನ ನೋವು ಅನುಭವಿಸಿದವರಿಗೆ ಗೊತ್ತು. ಶಾಸ್ತ್ರಿಗಳೂ, ರಾಮಾಶಾಸ್ತ್ರಿಗಳು ಎಷ್ಟೆಷ್ಟೋ ಪರಿಯಲ್ಲಿ ಸಮಾಧಾನ ಹೇಳಿದರೂ ಯಾವುದೂ ಪ್ರಯೋಜನಕ್ಕೆ ಬರಲಿಲ್ಲ.

ಆಗ ಶ್ರೀ ನರಸಿಂಹಶಾಸ್ತ್ರಿಗಳೇ ಮುಂದೆ ಬಂದರು. "ತಾಯಿ ಹದಿಮೂರು ಮಕ್ಕಳನ್ನು ದುಃಖದಿಂದ ಮೃತ್ಯುವಿಗೆ ಒಪ್ಪಿಸಬೇಕಾಯಿತು. ಒಬ್ಬನನ್ನಾದರೂ ಸಂತೋಷದಿಂದ ಗುರುವರ್ಯರಿಗೆ ಅರ್ಪಿಸಬಾರದೇ? ಎಂದು ವಿನಯದಿಂದ ಕೇಳಿ ಸಂನ್ಯಾಸಕ್ಕೆ ಅಪ್ಪಣೆ ಕೊಡಿರೆಂದು ಪ್ರಾರ್ಥಿಸಿದರು. ಕೊನೆಗೂ ಲಕ್ಷ್ಮಮ್ಮನವರು ಅಪ್ಪಣೆ ಕೊಟ್ಟರು. ಶಂಕರರ ತಾಯಿ ಆರ್ಯಾಂಬಿಕೆಯಂತೆ ಲಕ್ಷ್ಮಮ್ಮನವರೂ ಸಹ ತಮ್ಮ ಪುತ್ರನನ್ನು ತ್ಯಾಗ ಮಾಡಿದರು. ಅಪ್ಪಣೆ ಕೊಟ್ಟ ತಾಯಿಗೆ ನರಸಿಂಹಶಾಸ್ತ್ರಿಗಳು ಸಾಷ್ಟಾಂಗ ನಮಸ್ಕಾರ ಮಾಡಿದರು. ಹಾಗೆಯೇ ತಂದೆಯವರಿಗೂ ಪ್ರಣಾಮ ಮಾಡಿದರು. ಆ ದಿನವೇ ನರಸಿಂಹಶಾಸ್ತ್ರಿಗಳು ಕುಣಿಗಲ್ ರಾಮಾಶಾಸ್ತ್ರಿಗಳೊಡನೆ ಶೃಂಗೇರಿಗೆ ಪ್ರಯಾಣ ಮಾಡಿದರು. ಇತ್ತ ತಮ್ಮ ಉತ್ತರಾಧಿಕಾರಿಯು ಬರುವ ಮುನ್ನವೇ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರು ಪರೀಧಾವಿ ಸಂವತ್ಸರದ ಚೈತ್ರ ಶುದ್ಧ ಬಿದಿಗೆಯಂದು (೧೯೧೨) ಪಂಚಭೂತಗಳಲ್ಲಿ ಲೀನವಾದರು. ಮಠದ ದಕ್ಷಿಣ ಭಾಗದಲ್ಲಿ ಗುರುವರ್ಯರೇ ನಿರ್ಮಿಸಿಕೊಂಡಿದ್ದ ನೃಸಿಂಹವನದಲ್ಲಿಯೇ ಗುರುಗಳ ಕಳೇಬರವನ್ನು ಸಮಾಧಿ ಮಾಡಲಾಯಿತು. ಅತ್ತ ತ್ವರಿತಗತಿಯಲ್ಲಿ ಪ್ರಯಾಣ ನಡೆಸಿ ಶೃಂಗೇರಿಗೆ ದಯಮಾಡಿಸಿದ ಶ್ರೀ ನರಸಿಂಹಶಾಸ್ತ್ರಿಗಳು ಜಗದ್ಗುರುಗಳ ನಿರ್ಯಾಣದ ಸುದ್ಧಿಯಿಂದ ಸಿಡಿಲು ಬಡಿದಂತಾದರು.

ಶ್ರೀ ಗುರುಗಳವರ ಆರಾಧನಾದಿ ಉತ್ತರಕ್ರಿಯೆಗಳೆಲ್ಲವೂ ಸಾಂಗವಾಗಿ ನೆರವೇರಿದವು. ಇತ್ತ ಶೃಂಗೇರಿಯಲ್ಲಿ ಶ್ರೀ ನೃಸಿಂಹಭಾರತೀ ಸ್ವಾಮಿಗಳವರ ಆರಾಧನಾದಿ ಕಾರ್ಯವು ಒಂದೆಡೆ ನಡೆಯುತ್ತಿದ್ದರೆ ಮತ್ತೊಂದೆಡೆ ನೂತನ ಗುರುಗಳ ಆಶ್ರಮ ಸ್ವೀಕಾರಕ್ಕೆ, ಪಟ್ಟಾಭಿಷೇಕಕ್ಕೆ ಸಕಲ ಸಿದ್ಧತೆ ನಡೆಯುತ್ತಿದ್ದವು. ಎಲ್ಲೆಲ್ಲಿಯೂ ಹಬ್ಬದ ವಾತಾವರಣ ನಿರ್ಮಾಣವಾಯಿತು. ಇಂತಹ ಸಂದರ್ಭದಲ್ಲಿ ಕಂಡುಬಂದ ಒಂದೇ ಒಂದು ಕೊರತೆಯೆಂದರೆ ಶ್ರೀ ಗೋಪಾಲಶಾಸ್ತ್ರಿಗಳೂ, ಮಹಾಮಾತೆ ಲಕ್ಷ್ಮಮ್ಮನವರು ಸಕಾಲದಲ್ಲಿ ಶೃಂಗೇರಿಗೆ ಬರಲಾಗದೆ ತಮ್ಮ ಸುಪುತ್ರರು ದೀಕ್ಷೆಯನ್ನು ವಹಿಸುವುದನ್ನು ಕಾಣದೇ ಹೋದದ್ದು. ಬೆಂಗಳೂರಿನಿಂದ ಹೊರಟ ಆ ದಂಪತಿಗಳು, ಅತ್ಯಂತ ಪ್ರಯಾಸದಿಂದ ತರೀಕೆರೆಯವರಿಗೂ

ಬಂದು ಅಲ್ಲಿಂದ ಶೃಂಗೇರಿಗೆ ಬರಲು ಯಾವ ಸೌಕರ್ಯವೂ ದೊರಕದೆ ನಿರಾಶರಾಗಿದ್ದರು. ಮಾರನೇ ದಿನ ವಿಶೇಷ ಶ್ರಮದಿಂದ ಶೃಂಗೇರಿಗೆ ಆಗಮಿಸಿದಾಗ ತಾವು ಕಂಡದ್ದು ತಮ್ಮ ಬಾಲಕ ನರಸಿಂಹನನ್ನಲ್ಲ, ಬದಲಾಗಿ ದಕ್ಷಿಣಾಮ್ನಾಯ ಪೀಠದ ಆಚಾರ್ಯರಾಗಿದ್ದ ಜಗದ್ಗುರು ಶ್ರೀ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳನ್ನು.

ಪರಿಧಾವೀ ಸಂವತ್ಸರದ ಚೈತ್ರ ಬಹುಳ ಷಷ್ಠಿ ದಿನ (೭-೪-೧೯೧೨) ಶ್ರೀ ನರಸಿಂಹಶಾಸ್ತ್ರಿಗಳಿಗೆ ಸನ್ಯಾಸವಾಯಿತು. ಯತಿವರ್ಯರಿಗೆ ಶ್ರೀ ದಕ್ಷಿಣಾಮ್ನಾಯ ಪೀಠದ ಮಹಾವಾಕ್ಯವು ಶ್ರೀ ನೃಸಿಂಹಭಾರತೀ ಸ್ವಾಮಿಗಳವರ ಸನ್ನಿಧಿಯಲ್ಲಿಯೇ ದೀರ್ಘಕಾಲ ವಾಸಮಾಡುತ್ತಿದ್ದ ಸನ್ಯಾಸಿಗಳಿಂದ ಉಪದೇಶಿಸಲ್ಪಟ್ಟಿತು. "ಶ್ರೀ ಶ್ರೀ ಚಂದ್ರಶೇಖರ ಭಾರತೀ" ಎಂಬ ಯೋಗಪಟ್ಟವು ಮುಕ್ತರಾದ ಗುರುಗಳ ಆಜ್ಞೆಯಂತೆಯೇ ಕೊಡಲ್ಪಟ್ಟಿತು. ನೂತನ ಗುರುವರ್ಯರು ತಮ್ಮ ಅಮೃತವಾಣಿಯಿಂದ ಸಕಲರನ್ನು ಆಶೀರ್ವದಿಸಿದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರು ತಮ್ಮ ಗುರುಗಳಾದ ಶ್ರೀ ನೃಸಿಂಹಭಾರತೀ ಸ್ವಾಮಿಗಳವರಿಂದ ನೇರವಾಗಿ ಉಪದೇಶ ಪಡೆಯದಿದ್ದರೂ ಪ್ರತಿ ನಿತ್ಯ ಗುರುಗಳ ಸಮಾಧಿ ಸ್ಥಳದಲ್ಲಿಯೇ ಕುಳಿತು ಅವರನ್ನು ಧ್ಯಾನಿಸಿ ತಮಗೆ ಬೇಕಾದ ಮಾರ್ಗದರ್ಶನವನ್ನು ಪಡೆದುಕೊಳ್ಳುತ್ತಿದ್ದರು. ಮಠದ ಆಡಳಿತ ನಡೆಸಲು ದಕ್ಷರಾದ ಶ್ರೀಕಂಠಶಾಸ್ತ್ರಿಗಳಿದ್ದರು. ಆದ್ದರಿಂದ ಗುರುಗಳು ನಿಶ್ಚಿಂತರಾಗಿ ಯೋಗ, ವೇದಾಂತ, ತಪೋನುಷ್ಠಾನಗಳಲ್ಲಿ ಮಗ್ನರಾದರು. ಬೆಂಗಳೂರಿನ ಪಾಠಶಾಲೆಯಲ್ಲಿ ಒಂದು ಘಟ್ಟಕ್ಕೆ ಬಂದು ಹಠಾತ್ತಾಗಿ ನಿಂತುಹೋದ ಪಾಠಗಳು ಸಹ ಇಲ್ಲಿ ಪುನರಾರಂಭವಾದುವು. ಶ್ರೀ ಹಾನಗಲ್ ವಿರೂಪಾಕ್ಷ ಶಾಸ್ತ್ರಿಗಳು (ನಂತರ ಸಂನ್ಯಾಸ ದೀಕ್ಷೆ ಪಡೆದು ಕೂಡಲಿಯ ಪೀಠಕ್ಕೆ ಗುರುಗಳಾದರು.) ಗುರುವರ್ಯರಿಗೆ ವೇದಾಂತ ಪಾಠವನ್ನು ಹೇಳಲು ನಿಯಮಿಸಲ್ಪಟ್ಟರು. ಸಕಲ ವೇದಾಂತ ಶಾಸ್ತ್ರವನ್ನು ಗುರುವರ್ಯರು ಕೇವಲ ಎರಡೇ ವರ್ಷದಲ್ಲಿ ಕಲಿತರು. ವೇದಾಂತ ಪಾಠವನ್ನು ಸಂಪೂರ್ಣ ಕರಗತ ಮಾಡಿಕೊಂಡಿದ್ದರು. ವೇದಾಂತ ವಿದ್ಯಾಭ್ಯಾಸ, ಯೋಗಾಭ್ಯಾಸಗಳೆಲ್ಲವೂ ಪೂರ್ಣವಾಗುತ್ತ ಬಂದು ಸಂನ್ಯಾಸವಾದ ನಾಲ್ಕು ವರ್ಷಗಳಲ್ಲಿಯೇ ಶ್ರೀ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರು ಎಲ್ಲರಿಗೂ ಆದರ್ಶ ಪ್ರಾಯರಾದರು. ಜ್ಞಾನನಿಧಿಯಾಗಿ ಶ್ರೀ ಗುರುವರ್ಯರು ಸಾಕ್ಷಾತ್ ಮೇಧಾ ದಕ್ಷಿಣಾಮೂರ್ತಿ ಸ್ವರೂಪರಾದರು. ನರಸಿಂಹವನದಲ್ಲಿ ಏರ್ಪಟ್ಟಿದ್ದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರ ಮಹಾ ಸಮಾಧಿ ಮಂದಿರದ ನಿರ್ಮಾಣ ಕಾರ್ಯವು ಸಂಪೂರ್ಣಗೊಂಡಿದ್ದವು. ಶ್ರೀ ನೃಸಿಂಹ ಭಾರತೀ ಸ್ವಾಮಿಗಳ ಸಂಕಲ್ಪದಂತೆಯೇ ಶ್ರೀ ಶಾರದಾಲಯದ ಪುನರ್ನಿರ್ಮಾಣ ಕಾರ್ಯವು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ನೇತೃತ್ವದಲ್ಲಿಯೇ ನೆರವೇರಿತು. ಎರಡೂ ಆಲಯಗಳು ಸಂಪೂರ್ಣವಾಗಿದ್ದುದರಿಂದ ಕುಂಭಾಭಿಷೇಕವನ್ನು ನಡೆಸಿ ತಮ್ಮ ಗುರುಗಳವರ ಸಂಕಲ್ಪವನ್ನು ಈಡೇರಿಸಲು ನಿರ್ಧರಿಸಿದರು. ನಳ ಸಂವತ್ಸರದ ವೈಶಾಖ

ಶುದ್ಧ ಪಾಡ್ಯಮಿಯಂದು (೧೯೧೬) ಶ್ರೀ ನೃಸಿಂಹಭಾರತೀ ಸ್ವಾಮಿಗಳ ಮೂರ್ತಿಯನ್ನು ಪ್ರತಿಷ್ಠಾಪಿಸಿ ಕುಂಭಾಭಿಷೇಕ, ಪ್ರಾಣ ಪ್ರತಿಷ್ಠಾದಿಗಳನ್ನು ಸಾಂಗವಾಗಿ ನೆರವೇರಿಸಿದರು. ನಂತರ ಶ್ರೀ ಶಾರದಾಂಬಾ ದೇವಸ್ಥಾನಕ್ಕೆ ದಯಮಾಡಿಸಿ ಅಲ್ಲೂ ಸಹ ಕುಂಭಾಭಿಷೇಕ, ಪ್ರಾಣ ಪ್ರತಿಷ್ಠಾಪನೆಗಳನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿ ಸಮಸ್ತ ಶಿಷ್ಯರಿಗೂ ಪ್ರಸಾದವನ್ನು ಅನುಗ್ರಹಿಸಿದರು. ಅಂದು ಸಂಜೆ ಶ್ರೀ ಶಾರದಾಂಬಾ ರಥೋತ್ಸವವೂ ನಡೆಯಿತು.

ಉತ್ಸವಾದಿಗಳೆಲ್ಲವೂ ಕಳೆದ ಬಳಿಕ ಶ್ರೀ ಗುರುವರ್ಯರು ಮತ್ತೆ ತಪೋನುಷ್ಠಾನಗಳಲ್ಲಿ ನಿರತರಾದರು. ಬ್ರಹ್ಮಸೂತ್ರ ಪಾಠಗಳನ್ನು ಬೋಧಿಸುವ ಕೆಲ ಸಂದರ್ಭಗಳು, ಪೂಜಾದಿ ಕಾಲಗಳನ್ನು ಬಿಟ್ಟು ಉಳಿದೆಲ್ಲಾ ಕಾಲದಲ್ಲಿಯೂ ಏಕಾಂತದಲ್ಲಿ ಧ್ಯಾನ ಮಗ್ನರಾಗಿರುತ್ತಿದ್ದರು.

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊



ಇತ್ತ ಬೆಂಗಳೂರಿನಿಂದ ಹೊರಟು ತರೀಕೆರೆಯಲ್ಲಿ ಯಾವ ವಾಹನವೂ ಸಿಗದೇ ತಮ್ಮ ಏಕಮಾತ್ರ ಪುತ್ರ ನರಸಿಂಹನನ್ನು ಕಡೆಯದಾಗಿ ಒಮ್ಮೆ ಪುತ್ರ ವಾತ್ಸಲ್ಯ ದೃಷ್ಟಿಯಿಂದ ಕಾಣಲು ಸಾಧ್ಯವಾಗದೆ ಗೋಪಾಲಶಾಸ್ತ್ರಿಗಳೂ, ಲಕ್ಷ್ಮಮ್ಮನವರು ಅತ್ಯಂತ ಪರಿತಪಿಸಿದರು. ಬೆಂಗಳೂರಿನಿಂದ ಶೃಂಗೇರಿಗೆ ಬಂದ ಬಳಿಕ ಅವರು ಕಂಡದ್ದು ತಮ್ಮ ಏಕೈಕ ಪುತ್ರ ಮಾತಾ–ಪಿತೃವಾಕ್ಯ ಪರಿಪಾಲಕ ನರಸಿಂಹಶಾಸ್ತ್ರಿಯನ್ನಲ್ಲ. ಅವರು ದರ್ಶಿಸಿದುದು ಶೃಂಗೇರಿ ವ್ಯಾಖ್ಯಾನ ಸಿಂಹಾಸನಾಧೀಶ್ವರರಾದ ದಕ್ಷಿಣಾಮ್ನಾಯ ಪೀಠದ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನು. ಯಾರು ಭಕ್ತಿ ನಮ್ರತೆಯಿಂದ ತಮಗೆ ವಂದಿಸಿ ಆಶೀರ್ವಾದ ಪಡೆಯುತ್ತಿದ್ದರೋ ಅವರೇ ಇಂದು ತಮ್ಮಿಬ್ಬರ ಭಕ್ತಿ ಗೌರವಗಳನ್ನು ಸ್ವೀಕರಿಸಿ ಅನುಗ್ರಹಿಸುವವರಾಗಿದ್ದರು.

ಲಕ್ಷ್ಮಮ್ಮನವರ ಮನ ದುಃಖದಿಂದ ಕೂಡಿದ್ದರೂ ಮಗನನ್ನು ಶಾರದಾಂಬೆಗೆ ಅರ್ಪಿಸಿದ ಸಮಾಧಾನ ಹೊಂದಿದ್ದರು. ಮಠದಲ್ಲಿ ಆಗಾಗ ನಡೆಯುತ್ತಿದ್ದ ಉತ್ಸವ ಪೂಜಾದಿಗಳಲ್ಲಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನು ವಾತ್ಸಲ್ಯಭರಿತರಾಗಿ ಕಣ್ತುಂಬ ನೋಡುತ್ತಿದ್ದರು. ಆದರೆ ವಿಧಿ ಅವರನ್ನು ಅಲ್ಲಿಗೆ ಬಿಡಲಿಲ್ಲ. ಶ್ರೀ ಗೋಪಾಲಶಾಸ್ತ್ರಿಗಳು ೧೯೧೯ನೇ

ಇಸವಿಯಲ್ಲಿ ಇಹಲೋಕ ತ್ಯಜಿಸಿದರು. ಇದ್ದ ಒಬ್ಬ ಮಗನೂ ತಮ್ಮಿಂದ ದೂರವಾಗಿ ಸಂನ್ಯಾಸ ಜೀವನ ನಡೆಸುತ್ತಿದ್ದರೂ ಗೋಪಾಲಶಾಸ್ತ್ರಿಗಳು ತಾವು ಬದುಕಿರುವವರೆಗೂ ದೃಢಮನಸ್ಕರಾಗಿ ಎಲ್ಲವನ್ನು ಸಮಚಿತ್ತದಿಂದ ಸ್ವೀಕರಿಸುತ್ತಿದ್ದರು. ಆದರೆ ಲಕ್ಷ್ಮಮ್ಮನವರಿಗೆ ಮಾತ್ರ ಮಗ ಸಂನ್ಯಾಸ ಸ್ವೀಕರಿಸಿ ತಮ್ಮಿಂದ ದೂರವಾಗಿದ್ದಲ್ಲದೆ ತನ್ನ ಪತಿಯನ್ನೂ ಸಹ ಕಳೆದುಕೊಂಡಿದ್ದು ಭರಿಸಲಾಗದ ದುಃಖ ತರಿಸಿತ್ತು. ದುಃಖದಲ್ಲಿಯೇ ಕೊರಗಿ ಕೊರಗಿ ಕಡೆಗೆ ೧೯೨೨ರಲ್ಲಿ ಆಕೆಯೂ ಸಹ ದೇಹ ಬಂಧನದಿಂದ ಬಿಡುಗಡೆ ಹೊಂದಿದರು.

ಕುಂಭಾಭಿಷೇಕವಾದ ಬಳಿಕ ಸುಮಾರು ಏಳು ವರ್ಷಗಳ ಕಾಲ ಶ್ರೀ ಗುರುವರ್ಯರು ತಪೋನಿರತರಾಗಿದ್ದರು. ಕ್ಲುಪ್ತಕಾಲಗಳಲ್ಲಿ ಶ್ರೀ ಶಾರದಾಂಬಾ ದರ್ಶನಕ್ಕೂ ಮತ್ತು ತಮ್ಮ ಗುರುಗಳ ಅಧಿಷ್ಠಾನಕ್ಕೂ ದಯಮಾಡಿಸುತ್ತಿದ್ದರು. ಆಗಲೇ ಇತರರಿಗೆ ದರ್ಶನವೂ, ಭೇಟಿಯೂ ದೊರಕಬೇಕಾಗಿದ್ದಿತು. ಕೆಲವೇ ಜನ ಯೋಗ್ಯರಾದ ಶಿಷ್ಯರಿಗೆ ಅವರ ಅರ್ಹತೆಯನ್ನು ಪರೀಕ್ಷಿಸಿ ತಿಳಿದುಕೊಂಡ ಬಳಿಕ ಪಾಠ ಪ್ರವಚನ ನಡೆಸುತ್ತಿದ್ದರು. ಉಳಿದ ಕಾಲದಲ್ಲೆಲ್ಲಾ ಅವರ ದರ್ಶನ ಲಭ್ಯವಾಗುವುದೂ ಸಹ ಅಸಾಧ್ಯವಾಗುತ್ತಿತ್ತು. ಮನೋನಾಶವನ್ನು ಸುಲಭದಿಂದ ಸಾಧಿಸಿ ಶ್ರೀ ಗುರುವರ್ಯರು ಜೀವನ್ಮುಕ್ತ ಸ್ಥಿತಿಯನ್ನು ಈ ವೇಳೆಗಾಗಲೇ ಮುಟ್ಟಿದ್ದರು.

ಭಕ್ತರಿಂದಲೂ, ಶಿಷ್ಯವರ್ಗದವರಿಂದಲೂ ಗುರುಗಳು ಸಂಚಾರ ಕೈಗೊಳ್ಳಬೇಕೆಂದು ಪದೇ ಪದೇ ಪ್ರಾರ್ಥನೆಗಳು ಬರುತ್ತಲೇ ಇದ್ದವು. ಆದರೆ ಸದಾ ಧ್ಯಾನದಲ್ಲೇ ನಿರತರಾಗಿರುತ್ತಿದ್ದ ಗುರುವರ್ಯರು ಅದರ ಬಗ್ಗೆ ಯಾವುದೇ ತೀರ್ಮಾನವನ್ನು ಕೈಗೊಂಡಿರಲಿಲ್ಲ. ಭಕ್ತರ ಒತ್ತಾಯ ಹೆಚ್ಚಾದ ಮೇಲೆ ತಮ್ಮ ಗುರುವರ್ಯರ ಅಪ್ಪಣೆಯನ್ನು ಅಂತಃ ಪ್ರೇರಣೆಯ ಮೂಲಕ ಪಡೆದ ಗುರುಗಳು ಸಂಚಾರಕ್ಕೆ ಹೊರಡಲು ಸಿದ್ಧರಾದರು. ೧೯೨೪ರಲ್ಲಿ ಮಿತ ಪರಿವಾರದೊಡನೆ, ಮಿತವಾದ ಬಿರುದು ಬಾವಲಿಗಳು, ರಾಜಲಾಂಛನದೊಡನೆ ಸಂಪ್ರದಾಯಕ್ಕನುಗುಣವಾಗಿ ಹೊರಟ ಗುರುಗಳಿಗೆ ದಾರಿಯುದ್ದಕ್ಕೂ ಸಂಭ್ರಮದ ಸ್ವಾಗತ ದೊರಕಿತು. ಗುರುಗಳು ಎಲ್ಲೆಲ್ಲಿಯೂ ಅಧ್ಯಾತ್ಮ ಬೋಧನೆಗಳನ್ನು ಮಾಡುತ್ತಾ ಸರಳ ರೀತಿಯಲ್ಲಿ ಅರ್ಥವಾಗುವಂತೆ ಉಪದೇಶಿಸುತ್ತಾ ಧರ್ಮ ಮಾರ್ಗದಿಂದ ನಡೆಯುವಂತೆ ಪ್ರೇರೇಪಿಸುತ್ತ, ಕಳೆದುಕೊಳ್ಳುತ್ತಿದ್ದ ಧಾರ್ಮಿಕ ನಂಬಿಕೆಗಳನ್ನು ತುಂಬಿಕೊಡುತ್ತ ಮೈಸೂರಿಗೆ ಆಗಮಿಸಿದರು. ಶ್ರೀಮನ್ಮಹಾರಾಜರು ಸಕಲ ಗೌರವಗಳೊಂದಿಗೆ ಗುರುಗಳನ್ನು ಸ್ವಾಗತಿಸಿದರು. ರಾಜರ ಭಕ್ತಿಯನ್ನು ಗುರುಗಳು ಬಹಳವಾಗಿ ಮೆಚ್ಚಿದರು. ರಾಜರು ಗುರುಗಳಿಂದ ಆಶೀರ್ವಾದ ಪಡೆದರು. ಗುರುವರ್ಯರಿಂದ ವಿಶೇಷವಾದ ಉಪದೇಶವನ್ನೂ ಪಡೆದರು.

ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ದಿವ್ಯ ಸ್ಮೃತಿಮಂದಿರದ ಆರಂಭೋತ್ಸವವೂ, ಶ್ರೀ ಗುರುವರ್ಯರ ಮೂರ್ತಿ ಸ್ಥಾಪನೆಯೂ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ಅಮೃತ ಹಸ್ತದಿಂದಲೇ ನೆರವೇರಲ್ಪಟ್ಟವು. ಆ ಮಂದಿರಕ್ಕೆ ಅಭಿನವ ಶಂಕರಾಲಯವೆಂದು ನಾಮಕರಣವಾಯಿತು. ಅಲ್ಲಿ ವೇದಾಂತ ಮೀಮಾಂಸಾಶಾಸ್ತ್ರಗಳ ಪ್ರವಚನಕ್ಕೆ ಏರ್ಪಾಟು ಸಹ ನಡೆಯಿತು. ಆರಂಭೋತ್ಸವಕ್ಕೆ ಶ್ರೀಮನ್ಮಹಾರಾಜರಾದಿಯಾಗಿ, ಅಪಾರ ಭಕ್ತರೂ ಸೇರಿದ್ದರು. ತಪಶ್ಚಕ್ರವರ್ತಿಗಳನ್ನು ದರ್ಶನ ಮಾಡಿದ ಆ ಜನ ಸಂತೋಷದಿಂದಲೂ, ಭಕ್ತಿಯಿಂದಲೂ ಪುಳಕಿತರಾದರು.

ಗುರುಗಳು ಮೈಸೂರಿನಿಂದ ವಿಜಯ ಯಾತ್ರೆಯನ್ನು ಮುಂದುವರಿಸಿ ನಂಜನಗೂಡು, ಚಾಮರಾಜನಗರದ ಮಾರ್ಗವಾಗಿ ತಮಿಳುನಾಡಿನ ಸತ್ಯಮಂಗಲಕ್ಕೆ ಆಗಮಿಸಿದರು. ದಾರಿಯುದ್ದಕ್ಕೂ ಭಕ್ತಿ ಗೌರವಪೂರ್ವಕವಾಗಿ ಜನ ನೀಡಿದ ಸ್ವಾಗತವನ್ನು ಸ್ವೀಕರಿಸಿ ಎಲ್ಲರಿಗೂ ಮಂಗಳವನ್ನು ಬಯಸುತ್ತ ತಮಿಳುನಾಡಿನ ಪ್ರಥಮ ವಾಸ್ತವ್ಯಕ್ಕೆ ದಯಮಾಡಿಸಿದರು. ಹೋದೆಡೆಗಳಲ್ಲೆಲ್ಲ ಗುರುಗಳು ಸಾಧಾರಣವಾಗಿ ಕನ್ನಡ, ತೆಲುಗು, ಸಂಸ್ಕೃತ ಭಾಷೆಯಲ್ಲಿ ಸಂದರ್ಭಾನುಸಾರ ಉಪನ್ಯಾಸ ಮಾಡುತ್ತಿದ್ದರು. ವಿದ್ವತ್ಸಭೆಗಳಲ್ಲಿ ಅಧ್ಯಕ್ಷ ಭಾಷಣ, ಅನುಗ್ರಹ ಭಾಷಣಗಳು, ಸಂಸ್ಕೃತದಲ್ಲಿ ನಡೆಯುತ್ತಿದ್ದವು.

ಆದರೆ ಅಲ್ಲಿನ ಕೆಲವು ಜನ ಪ್ರಮುಖರು ಮಠದ ಕಾರ್ಯಭಾರಿಯಾಗಿದ್ದ ಶ್ರೀಕಂಠಶಾಸ್ತ್ರಿಗಳವರನ್ನು ಭೇಟಿ ಮಾಡಿ, "ಗುರುಗಳು ಇಂದು ತಮಿಳಿನಲ್ಲಿ ನಾಲ್ಕು ಮಾತನ್ನಾದರೂ ಆಡಿ ಅನುಗ್ರಹಿಸಬೇಕು. ಸಾಧಾರಣವಾಗಿ ಇತ್ತಕಡೆಯೆಲ್ಲಾ ಶೃಂಗೇರಿಯ ಗುರುಗಳು ಸಂಚಾರ ಬಂದಾಗ ಸಂಸ್ಕೃತದಲ್ಲಿಯೇ ಉಪನ್ಯಾಸ ಕೊಡುತ್ತಾರೆ. ಸಂಸ್ಕೃತವು ಬಹುಜನಕ್ಕೆ ಅರ್ಥವಾಗದ ಭಾಷೆಯಾಗಿದೆ. ಆದ್ದರಿಂದ ಶ್ರೀಗಳವರು ತಮಿಳಿನಲ್ಲಿ ನಾಲ್ಕು ಮಾತನ್ನಾದರೂ ಆಡಿ ಉಪದೇಶ ಭಾಷಣವನ್ನು ಅನುಗ್ರಹಿಸಬೇಕೆಂದು ಭಕ್ತಾದಿಗಳು ಪ್ರಾರ್ಥಿಸುತ್ತಾರೆ" ಎಂಬುದಾಗಿ ವಿಜ್ಞಾಪಿಸಿದರು. ಶ್ರೀಕಂಠಶಾಸ್ತ್ರಿಗಳಿಗೆ ಯೋಚನೆಯಾಯಿತು. ಗುರುಗಳಿಗೆ ತಮಿಳು ಭಾಷೆಯ ಪರಿಚಯವಿಲ್ಲವೆಂದೂ, ಅವರು ಕಲಿತುದ್ದೆಲ್ಲಾ ಕನ್ನಡ, ಸಂಸ್ಕೃತ, ತೆಲುಗು ಮಾತ್ರವೆಂದು ಅವರನ್ನು ತಮಿಳಿನಲ್ಲಿಯೇ ಮಾತನಾಡಬೇಕೆಂದು ಪ್ರಾರ್ಥಿಸುವುದು ಯುಕ್ತವಲ್ಲವೆಂದು ಆ ಜನಕ್ಕೆ ತಿಳಿಹೇಳಿದರು. ಆದರೆ ಬಂದಿದ್ದ ಆ ಪ್ರಮುಖರು "ನಾಲ್ಕೇ ಮಾತನ್ನಾಡಿದರೂ ಸಾಕು, ಅದೇ ನಮಗೆ ಅನುಗ್ರಹ, ನಾವು ಕೃತಾರ್ಥರಾಗುತ್ತೇವೆ" ಎಂದು ಕಳಕಳಿಯಿಂದ ಬಿನ್ನವಿಸಿದರು. ಶ್ರೀಕಂಠಶಾಸ್ತ್ರಿಗಳಿಗೆ ಏನು ಮಾಡುವುದೆಂದು ತೋಚದೆ ನೇರವಾಗಿ ಗುರುಗಳಲ್ಲಿಗೆ ಬಂದರು.

ಆತಂಕದಿಂದ ಇದ್ದ ಶಾಸ್ತ್ರಿಗಳನ್ನು ಕಂಡ ಗುರುಗಳು ವಿಷಯವೇನೆಂದು ಪ್ರಶ್ನಿಸಿದರು.

ಶಾಸ್ತ್ರಿಗಳು ಆ ಜನಗಳು ಹೇಳಿದ ಎಲ್ಲವನ್ನು ಅರಿಕೆ ಮಾಡಿದರು. ಅದಕ್ಕೆ ಶ್ರೀ ಗುರುವರ್ಯರು, "ಆಗಲಿ, ಶ್ರೀ ಶಾರದಾಂಬೆಯ ಇಚ್ಛೆಯಿದ್ದಲ್ಲಿ ತಮಿಳಿನಲ್ಲಿಯೇ ನಾಲ್ಕು ಮಾತು ಹೇಳಿದರಾಯಿತು. ಅವರ ಉತ್ಸಾಹವೇಕೆ ಭಂಗ ಮಾಡಬೇಕು?'' ಎಂದು ಅಪ್ಪಣೆ ಕೊಡಿಸಿದರು. ಶಾಸ್ತ್ರಿಗಳಿಗೆ ಆಶ್ಚರ್ಯವಾಯಿತು. ತಮಿಳುಬಾರದವರು ತಮಿಳಿನಲ್ಲಿ ಮಾತನಾಡಲು ಸಾಧ್ಯವೇ? ಎಲ್ಲಾದರೂ ಆಭಾಸವಾದರೆ ಏನು ಗತಿ? ಎಂದು ಚಿಂತೆಯೂ ಆಯಿತು.

ಆ ಸಂಜೆ ಕಾರ್ಯಕ್ರಮಗಳೆಲ್ಲವೂ ಮುಗಿದ ಬಳಿಕ ಶ್ರೀ ಗುರುವರ್ಯರು ಉಪನ್ಯಾಸ ಪೀಠಕ್ಕೆ ದಯಮಾಡಿಸಿದರು. ಅವರ ಅಮೃತವಾಣಿಯನ್ನಾಲಿಸಲು ಕಾತರರಾಗಿದ್ದ ಭಕ್ತಾದಿಗಳು ಎದ್ದು ನಿಂತು ತಮ್ಮ ಭಕ್ತಿ ಗೌರವಗಳನ್ನು ಸೂಚಿಸಿದರು. ಗುರುವರ್ಯರು ಪೀಠದಲ್ಲಿ ಕುಳಿತುಕೊಂಡರು. ಬಳಿಕ ಉಪನ್ಯಾಸವಾರಂಭಿಸಿದರು. ಅಚ್ಚ ತಮಿಳಿನಲ್ಲಿ ನಿರರ್ಗಳವಾಗಿ ಗುರುಗಳು ಮಾತನಾಡುತ್ತಿದ್ದರೆ ಸಭೆಯಲ್ಲಿದ್ದ ಭಕ್ತರೆಲ್ಲರೂ ಹರ್ಷದಿಂದ ಉಬ್ಬಿಹೋದರು. ಗುರುಗಳು ಸರಳವೂ, ಅರ್ಥಗರ್ಭಿತವೂ, ಸುಂದರವೂ ಆದ ಉಪದೇಶವನ್ನು ತಮಿಳಿನಲ್ಲಿಯೇ ಅನುಗ್ರಹಿಸಿದರು. ಶಾಸ್ತ್ರಿಗಳಿಗಂತೂ ಪರಮಾಶ್ಚರ್ಯವಾಯಿತು. ಗುರುಗಳು ಇದೇ ಮೊದಲು ತಮಿಳುನಾಡಿಗೆ ಬಂದಿದ್ದು. ಶೃಂಗೇರಿಯಲ್ಲಿ ತಮಿಳು ಭಕ್ತರೊಡನೆ ಮಾತನಾಡಲು ಅಲ್ಪ ಸ್ವಲ್ಪ ತಮಿಳು ಕಲಿತಿರಬಹುದಾದರೂ ಈ ರೀತಿ ನಿರರ್ಗಳವಾಗಿ ಪಂಡಿತರಂತೆ ಮಾತನಾಡಲು ಸಾಧ್ಯವಿಲ್ಲ. ಶ್ರೀಕಂಠಶಾಸ್ತ್ರಿಗಳು, ಶ್ರೀ ಗುರುವರ್ಯರು ತಮ್ಮ ಸಾಧನೆಯ ಅತ್ಯಲ್ಪಕಾಲದಲ್ಲಿಯೇ ಗಳಿಸಿದ್ದ ಈ ಶಕ್ತಿಯನ್ನು ಕಂಡು ವಿಸ್ಮಿತರಾದರು.

ಮುಂದೆ ಗುರುವರ್ಯರು ಹೋದೆಡೆಯಲ್ಲೆಲ್ಲಾ ತಮಿಳಿನಲ್ಲೇ ಉಪನ್ಯಾಸ ಮಾಡಿದರು. ಮುಂದೆ ಸತ್ಯಮಂಗಲದಿಂದ ರಾಮೇಶ್ವರ, ಅಲ್ಲಿಂದ ಮಧುರೆ, ತಿನ್ನವೆಲ್ಲಿ ಜಿಲ್ಲೆ, ಹೀಗೆ ಹಲವಾರು ಕಡೆ ಸಂಚರಿಸಿ ಶ್ರೀ ಗುರುವರ್ಯರು ತಿರುವಾಂಕೂರಿಗೆ ತಲುಪಿದರು. ಅಲ್ಲಿ ಹಲವು ದಿನ ವಾಸವಿದ್ದು ಎಲ್ಲರನ್ನು ಅನುಗ್ರಹಿಸಿ ಅಲ್ಲಿಂದ ಮುಂದೆ ಶ್ರೀ ಆದಿಶಂಕರರ ಜನ್ಮಸ್ಥಳವಾದ ಕಾಲಟೀ ಕ್ಷೇತ್ರವನ್ನು ತಲುಪಿದರು. ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಮಹಾಸ್ವಾಮಿಗಳವರು ಕಾಲಟೀ ಕ್ಷೇತ್ರವನ್ನು ಪರಿಷ್ಕರಿಸಿ ಶ್ರೀ ಶಂಕರ ಭಗವತ್ಪಾದರ ಮತ್ತು ಶ್ರೀ ಶಾರದಾಂಬಾ ದೇವಸ್ಥಾನಗಳನ್ನು ನಿರ್ಮಿಸಿದ್ದರು. ೧೯೧೦ರಲ್ಲಿ ಉದ್ಧರಿಸಲ್ಪಟ್ಟ ಈ ಸ್ಥಳದಲ್ಲಿ ಶ್ರೀ ಚಂದ್ರಶೇಖರಭಾರತೀ ಸ್ವಾಮಿಗಳು ಒಂದು ವೇದ ಪಾಠಶಾಲೆಯನ್ನು ಮತ್ತು ಅಗ್ರಹಾರವನ್ನು ಕಟ್ಟಿಸಿದರು. ೧೯೨೭ರಲ್ಲಿ ತಾವು ಆ ಸ್ಥಳಕ್ಕೆ ಭೇಟಿ ಇತ್ತಾಗ ಉಚ್ಚ ಶಿಕ್ಷಣವೀಯುವ ವೇದಾಂತ ಪಾಠಶಾಲೆಯನ್ನು ಸ್ಥಾಪಿಸಿದರು. ಮತ್ತು ಅಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯವನ್ನೂ, ಅವರ ಖರ್ಚು

ವೆಚ್ಚಕ್ಕೆ ಸಾಕಾಗುವಷ್ಟು ವಿದ್ಯಾರ್ಥಿ ವೇತನವನ್ನೂ ಸಹ ಕಲ್ಪಿಸಿದ್ದರು. ಕಾಲಟಿಯಲ್ಲಿ ತಮ್ಮ ಸಂಕಲ್ಪ ಪೂರ್ಣವಾದ ಬಳಿಕ ಕೊಯಿಮತ್ತೂರು ಜಿಲ್ಲೆಯ ಮಾರ್ಗವಾಗಿ ಮತ್ತೆ ನಂಜನಗೂಡಿಗೆ ದಯಮಾಡಿಸಿದರು. ಅಲ್ಲಿಯೂ ಸಹ ಒಂದು ಪಾಠಶಾಲೆಯನ್ನು ಸ್ಥಾಪಿಸಿ, ಆ ಬಳಿಕ ೧೯೨೭ರ ಕೊನೆಗೆ ಶೃಂಗೇರಿಗೆ ಹಿಂದಿರುಗಿ ಬಂದರು. ಅಷ್ಟರಲ್ಲಾಗಲೇ ಗುರುಗಳಿಗೆ ಲೌಕಿಕದ ಸಂಪರ್ಕ ಸಾಕೆನಿಸಿತ್ತು.

ಅವರ ಪ್ರೀತಿ ವಿಶ್ವಾಸಗಳು ಸರ್ವರಿಗೂ ಸಮಾನವಾಗಿದ್ದು ಸಮಾಜದ ಉಚ್ಚವರ್ಗದವರು, ಕೆಳವರ್ಗದವರು, ಶ್ರೀಮಂತ, ಬಡವ, ಕಲಿತವರು, ಕಲಿಯದವರು, ಹಿಂದೂಗಳು, ಹಿಂದುವೇತರರು, ಆಸ್ತಿಕರು ಮತ್ತು ನಾಸ್ತಿಕರು ಮುಂತಾದವರನ್ನೆಲ್ಲರನ್ನೂ ಆಕರ್ಷಿಸಿ ವಿಶ್ವಾಸ, ದಯೆ, ಕರುಣೆಯಿಂದ ಕಾಣುತ್ತಿದ್ದರು. ನಾಸ್ತಿಕರಾದವರನ್ನು ಧರ್ಮದತ್ತ ನಡೆಸಿ ಅಂತಹವರಲ್ಲಿ ಹೊಸ ಬೆಳಕು ಮೂಡಿಸುತ್ತಿದ್ದರು. ಅವರ ಉಪದೇಶವು ಧರ್ಮಾಚರಣೆಯಲ್ಲಿದ್ದವರಿಗಂತೂ ಶಕ್ತಿವರ್ಧಕ ಔಷಧಿಗಳಾಗಿದ್ದವು. ಗುರುಗಳ ಸಂಚಾರ ಕಾಲದಲ್ಲಿ, ಜೀವನದಲ್ಲಿ ನಂಬಿಕೆ ಶ್ರದ್ಧೆ ಕಳೆದುಕೊಂಡು ದಾರಿ ತಪ್ಪಿದವರೆಷ್ಟೋ ಮಂದಿ ಸರಿದಾರಿಗೆ ಬಂದು ಜೀವನದ ಸಾರ್ಥಕತೆ ಕಂಡುಕೊಂಡರು.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಅಷ್ಟಾಂಗ ಯೋಗಮಾರ್ಗದಲ್ಲಿ ಸಾಧನೆ ನಡೆಸಿದ್ದರು. ಸಂನ್ಯಾಸಾ ನಂತರ ತಮ್ಮ ವೇದಾಂತ ವಿದ್ಯಾಭ್ಯಾಸ ಪೂರ್ಣವಾದ ಬಳಿಕ ಗುರುಗಳು ರಾಜಯೋಗದ ಕಠಿಣ ತಪಶ್ಚರ್ಯೆಯನ್ನು ಕೈಗೊಂಡಿದ್ದರು. ಸದಾ ಕಾಲವು ಪಾರಮಾರ್ಥಿಕ ವಸ್ತುವಿನತ್ತಲೇ ಅವರ ದೃಷ್ಟಿಯಿದ್ದುದರಿಂದ ಬಾಹ್ಯವ್ಯಾಪಾರದಲ್ಲಿ ಅವರು ಅನಾಸಕ್ತರಾಗಿದ್ದರು. ಶ್ರೀ ಶಾರದಾ ದೇವಾಲಯದ ಕುಂಭಾಭಿಷೇಕವಾದ ನಂತರ ಅವರ ತಪಶ್ಚರ್ಯೆ ಇನ್ನು ಕಠಿಣವಾಯಿತು. ಆ ಮಧ್ಯದಲ್ಲಿ ಭಕ್ತರಿಂದ ಅನೇಕ ಪ್ರಾರ್ಥನೆಗಳು ಬಂದುದರಿಂದ ಅವರು ಸಂಚಾರ ಕಾರ್ಯವನ್ನು ಕೈಗೊಳ್ಳಬೇಕಾಯಿತು, ಸದಾ ಪರಬ್ರಹ್ಮ ಚಿಂತನೆಯಲ್ಲೇ ಇರುತ್ತಿದ್ದ ಗುರುವರ್ಯರು ಸಂಪೂರ್ಣವಾಗಿ ಬಾಹ್ಯ ವ್ಯಾಪಾರದಿಂದ ದೂರವಾಗಿದ್ದರು ಅಥವಾ ಬಾಹ್ಯವ್ಯಾಪಾರ ಕಡಿದೇ ಹೋಗುತ್ತಿತ್ತು. ಆದರೂ ಸಹ ಸಂಚಾರ ಕಾಲದಲ್ಲಿ ಸುಮಾರು ಮೂರು ವರ್ಷಗಳು ಅವರ ನಡೆನುಡಿಗಳೆಲ್ಲವೂ ಸ್ವಾಭಾವಿಕವಾಗಿಯೇ ಇದ್ದವು. ಆ ಸಂಚಾರ ಕಾಲದಲ್ಲಿ ಅವರಿಗೆ ತಪೋನುಷ್ಠಾನಕ್ಕೆ ಸಾಕಷ್ಟು ಸಮಯವೇ ದೊರಕುತ್ತಿರಲಿಲ್ಲ. ಶೃಂಗೇರಿಗೆ ಹಿಂದಿರುಗಿದ ನಂತರ ಮತ್ತೆ ತಮ್ಮ ಸಾಧನೆಯನ್ನು ಮುಂದುವರಿಸಿದರು. ಬಾಹ್ಯ ಜಗತ್ತಿನಿಂದ ಕ್ರಮೇಣ ದೂರ ಸರಿದರು.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರು ಸಾಧನೆ ಮಾಡಿದ್ದ ಸಿದ್ಧ ಪುರುಷರು. ಅವರಿಗೆ ಎಲ್ಲೆಲ್ಲಿ ಏನೇನು ನಡೆಯುತ್ತಿದೆ ಎಂಬುದರ ಅರಿವಾಗುತ್ತಿತ್ತು. ಯಾರ

ಮನಸ್ಸಿನಲ್ಲಿ ಎಂತೆಂತಹ ಆಲೋಚನೆಗಳಿವೆ?, ಯಾರು ಯಾವ ತೊಂದರೆಯಲ್ಲಿ ಸಿಲುಕಿದ್ದಾರೆ?, ಯಾರು ಯಾವ ಚಿಂತೆ ವ್ಯಸನಗಳಲ್ಲಿ ಮುಳುಗಿದ್ದಾರೆ?, ತಮ್ಮಲ್ಲಿಗೆ ಬರುವವರಲ್ಲಿ ಯಾರು ಪ್ರಾಮಾಣಿಕರು?, ಯಾರು ಕಪಟಿಗಳು?, ಯಾರು ನಿಜವಾದ ತಿಳಿವಿಗಾಗಿ ಬರುತ್ತಾರೆ?, ತೋರಿಕೆಗಾಗಿ ಬರುವವರು ಯಾರು? ಎಂಬುದೆಲ್ಲವೂ ಅವರಿಗೆ ತಿಳಿದುಬಿಡುತ್ತಿತ್ತು.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರು ಯೋಗಮಾರ್ಗದ ತುತ್ತತುದಿಯಲ್ಲಿದ್ದು ಆತ್ಮಸಾಕ್ಷಾತ್ಕಾರ ಮಾಡಿಕೊಂಡಿದ್ದ ಮಹಾಪುರುಷರು. "ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗಾನುಷ್ಠಾನನಿಷ್ಠ" ಎಂಬ ಬಿರುದನ್ನೂ ಸಾರ್ಥಕಪಡಿಸಿಕೊಂಡಿದ್ದವರು. ದಕ್ಷಿಣಾಮ್ನಾಯ ಪೀಠಾಧೀಶ್ವರರಾಗಿ ಅಕ್ಷರಶಃ ಜಗದ್ಗುರುವೇ ಆಗಿದ್ದರೂ ಸಹ ಸರಳರು, ಆಡಂಬರಹಿತರೂ, ವಾತ್ಸಲ್ಯಪೂರ್ಣರೂ ಆಗಿದ್ದರು. ಪೀಠಾಧಿಪತಿಗಳಾಗಿದ್ದರೂ ಜಗದ್ಗುರುಗಳ ಲಾಂಛನಗಳನ್ನು ದೂರವಿರಿಸಿದ್ದರು. ಉಡುಗೆಯಲ್ಲಿಯೂ ಸಹ ಅತ್ಯಂತ ಸಾಧಾರಣವಾದ ಕಾಷಾಯವಸ್ತ್ರಗಳೇ ವಿನಾ ಬೆಲೆಬಾಳುವ ವಸ್ತ್ರಗಳನ್ನು ಧರಿಸಿದವರಲ್ಲ. ಗುರುಗಳು ಅಂತರ್ಮುಖರಾಗಿದ್ದಾಗ ತಿಂಗಳುಗಟ್ಟಲೆ ಹೊರಕ್ಕೆ ಬರದೇ ಇದ್ದು ಬಿಡುತ್ತಿದ್ದರು.

ಕಾಲಾವಕಾಶ, ಏಕಾಂತತೆ, ಮುಂತಾದ ಸೌಲಭ್ಯಗಳು ಸಾಧನೆಗೆ ಅತ್ಯಾವಶ್ಯಕವಾಗಿದ್ದರಿಂದ ಗುರುಗಳು ತಮ್ಮ ಈ ನಿಶ್ಚಿತ ಗುರಿಯನ್ನು ಮುಟ್ಟುವುದಕ್ಕೆ ಯಾವ ವಿಘ್ನಗಳು ಬರದಂತೆ ಹತ್ತಿರಕ್ಕೆ ಯಾರನ್ನೂ ಸೇರಿಸುತ್ತಿರಲಿಲ್ಲ. ಈ ಸಾಧನೆ ವಿನಾ ಏನನ್ನೂ ಮಾಡುತ್ತಿರಲಿಲ್ಲ. ನಿಶ್ಚಿತ ಗುರಿ ಸೇರಿದ ಬಳಿಕ ಮನಸ್ಸು ಹೊರಜಗತ್ತಿಗೆ ಬರಬೇಕಾದರೆ ಅನೇಕ ದಿನಗಳೇ ಬೇಕಾಗುತ್ತಿದ್ದವು. ಆ ಸಮಾಧಿಯ ಸಂದರ್ಭದಲ್ಲಿ ಶ್ರೀ ಗುರುವರ್ಯರ ಬಾಹ್ಯಾಚರಣೆ, ನಡವಳಿಕೆಗಳು, ಮಾತುಗಳು ಎಲ್ಲವೂ ವಿಚಿತ್ರವಾಗಿ ತೋರುತ್ತಿದ್ದವು, ಅವರ ಬಳಿ ಸುಳಿಯುತ್ತಿದ್ದ ಜನರಿಗೆ. ಸಮಾಧಿಯಿಂದ ಹಿಂದಿರುಗಿದ ಬಳಿಕ ಗುರುವರ್ಯರು ಸ್ನಾನ, ಜಪ, ಪೂಜಾನುಷ್ಠಾನಗಳನ್ನು ನಡೆಸುತ್ತಿದ್ದರು.

ಗುರುದೇವರು ತಮ್ಮ ಕೊಠಡಿಯಲ್ಲಿ ಧ್ಯಾನಮಗ್ನರಾಗಿರುತ್ತಿದ್ದಾಗ ಅವರಿಗೆ ವಿಘ್ನವಾಗದಂತೆ, ಪರಿಚಾರಕರು ಅವರ ಕೊಠಡಿ ಪ್ರವೇಶಿಸುತ್ತಿದ್ದರು. ಅವರ ದೈನಂದಿನ ಅವಶ್ಯಕತೆಗಳೇನೆಂದು ಅರಿತುಕೊಂಡು ಪೂಜಾ ಸಾಮಗ್ರಿಗಳಿಂದ ಹಿಡಿದು ಆಹಾರ ಪಾನೀಯಗಳೆಲ್ಲವನ್ನೂ ಸಿದ್ಧಪಡಿಸುತ್ತಿದ್ದರು. ಗುರುದೇವರು ಬಹಿರ್ಮುಖರಾದಾಗ ಅವರ ದೃಷ್ಟಿ ಆ ವಸ್ತುಗಳ ಮೇಲೆ ಬಿದ್ದರೆ ಬಿತ್ತು ಇಲ್ಲದಿದ್ದರೆ ಇಲ್ಲ. ಅವರು ಅನೇಕ ದಿನಗಳಗಟ್ಟಲೆ ಬಹಿರ್ವ್ಯಾಪಾರದಿಂದ ಮುಕ್ತರಾಗಿ ಧ್ಯಾನಮಗ್ನರಾಗಿ ಇದ್ದು ಬಿಡುತ್ತಿದ್ದರು. ಅವರಿಗಾಗಿ ತಂದಿರುವ ಪದಾರ್ಥಗಳು ಇದ್ದಲ್ಲಿಯೇ ಹಳಸುತ್ತಿದ್ದುದನ್ನು ಕಂಡ

ಪರಿಚಾರಕರು ಸದ್ದು ಮಾಡದೆ ಅವನ್ನು ತೆಗೆದುಹಾಕಿ ಸ್ಥಳವನ್ನು ಸ್ವಚ್ಛಗೊಳಿಸುತ್ತಿದ್ದರು. ಅನೇಕ ದಿನಗಳ ಕಾಲ ಆಹಾರ ಪಾನೀಯವಿಲ್ಲದೆ ಕೃಶವಾಗಿದ್ದರೂ ಗುರುಗಳು ಅಗ್ನಿಕುಂಡದ ಜ್ವಾಲೆಯಂತೆ ಪ್ರಕಾಶವನ್ನೂ ತೇಜಸ್ಸನ್ನು ಬೀರುತ್ತಿದ್ದರು.

ಈ ಸಾಧನಾ ಕಾಲದಲ್ಲಿ ವೈದ್ಯರುಗಳಿಂದ ಗುರುದೇವರಿಗೆ ಸಾಕಷ್ಟು ತೊಂದರೆಯೂ ಅನಾನುಕೂಲವೂ ಉಂಟಾಗಿತ್ತು. ಸಾಧನೆ ತೀವ್ರವಾದಂತೆ ಅವರು ಹಸಿವನ್ನು ನಿದ್ರೆಯನ್ನು ಗೆಲ್ಲುವ ಮಜಲಿನಲ್ಲಿದ್ದರು. ಈ ಆಧ್ಯಾತ್ಮಿಕ ಸಾಧನೆಯ ಆಂತರ್ಯವನ್ನು ಅರಿಯದ ವೈದ್ಯರು, ಇದು ಒಂದು ಮನೋರೋಗವಿರಬಹುದು ಎಂದು ಭಾವಿಸಿ ಅದರ ನಿವಾರಣೆಗಾಗಿ ಸಕಲ ಏರ್ಪಾಟನ್ನು ಮಾಡಿದ್ದರು. ಗುರುಗಳನ್ನು ನಾನಾ ವಿಧವಾಗಿ ಪರೀಕ್ಷಿಸಿದರು. ಆದರೆ ಯಾರಿಗೂ ಗುರುಗಳ ಮನಸ್ಥಿತಿಯನ್ನು ಅರಿಯಲಾಗಲಿಲ್ಲ. ಹುಚ್ಚು ಎಂದುಕೊಂಡಾಗ, ಸಹಜವಾಗಿ ವರ್ತಿಸುತ್ತಿದ್ದರು. ಸರಿಯಾಗಿಯೇ ಇದ್ದಾರೆ ಎಂದುಕೊಂಡರೆ, ಅವರ ಚರ್ಯೆ ಬಹಳ ವಿಚಿತ್ರವಾಗಿರುತ್ತಿತ್ತು. ಮಠದ ಆಡಳಿತ ಮಂಡಳಿ, ವೈದ್ಯರು, ಶಿಷ್ಯರಿಗೆ ಗುರುಗಳನ್ನು ಅರ್ಥಮಾಡಿಕೊಳ್ಳುವುದೇ ಅಸಾಧ್ಯವಾಯಿತು.

ಗುರುಗಳು ಅಂತರ್ಮುಖರಾಗುವುದು ಬರಬರುತ್ತ ಹೆಚ್ಚಾಯಿತು. ಮಠದ ಆಡಳಿತದಲ್ಲಿ ಸಲಹೆ ಕೊಡುವುದು, ಕೆಲಸ ಕಾರ್ಯಗಳ ಪರಿಶೀಲನೆ ನಡೆಸುವುದು, ಇತ್ಯಾದಿಗಳು ಕಡಿಮೆಯಾಗುತ್ತ ಬಂದು ನಿಂತೇ ಹೋದವು. ಶೃಂಗೇರಿ ಮಠದಂತಹ ದೊಡ್ಡ ಆಧ್ಯಾತ್ಮಿಕ ಸಂಸ್ಥೆಯ ಅಧ್ಯಕ್ಷರಾದವರು ಯಾರನ್ನೂ ನೋಡದೆ, ಯಾರಲ್ಲಿಯೂ ಮಾತನಾಡದೆ, ಯಾರಿಗೂ ಕಾಣಿಸಿಕೊಳ್ಳದೆ ತಿಂಗಳುಗಟ್ಟಲೆ ಅದೃಶ್ಯರಾಗಿಬಿಡುತ್ತಿದ್ದುದು, ಲೋಕ ವ್ಯವಹಾರಗಳಲ್ಲಿ ಅನಾಸಕ್ತರಾಗಿಬಿಡುತ್ತಿದ್ದುದು, ಬಹು ಜನರಿಗೆ ಯೋಚನೆಯ ವಿಷಯವಾಯಿತು.

ನೆಲಮಾವು ಮಠದ ಶ್ರೀ ಕಮಲಾನಂದ ನರಸಿಂಹಭಾರತೀ ಸ್ವಾಮಿಗಳವರು, ಶ್ರೀ ಗುರುವರ್ಯರಲ್ಲಿ ಅಧ್ಯಾತ್ಮ ಮಾರ್ಗದರ್ಶನವನ್ನೂ ವೇದಾಂತ ವಿದ್ಯಾಭ್ಯಾಸವನ್ನು ಮಾಡಿದ್ದವರು. ಗುರುದೇವರ ಆರೋಗ್ಯದಲ್ಲಿ ವ್ಯತ್ಯಾಸವಾಗಿ ಅವರಿಗೆ ಮನೋವಿಕಲ್ಪವಾಗಿಬಿಟ್ಟಿದೆಯೆಂಬ ವರ್ತಮಾನ ಕಿವಿಗೆ ಬಿದ್ದು ನೆಲಮಾವು ಸ್ವಾಮಿಗಳು ತಮ್ಮ ದೂರ ದೇಶದ ಸಂಚಾರವನ್ನು ನಿಲ್ಲಿಸಿ ಶೃಂಗೇರಿಯತ್ತ ಓಡಿಬಂದರು. ನರಸಿಂಹವನಕ್ಕೆ ಧಾವಿಸಿ ಬಂದಾಗ ಅವರು ನೋಡಿದುದು ಬೀಗ ಹಾಕಿದ್ದ ಕೊಠಡಿಯೊಂದನ್ನು. ಬಾಗಿಲಲ್ಲಿ ಒಬ್ಬ ಪರಿಚಾರಕನೂ ಇದ್ದ. ಗುರುದೇವರನ್ನು ದರ್ಶಿಸುವ ತವಕದಿಂದ ಬಂದ ನೆಲಮಾವು ಸ್ವಾಮಿಗಳು ಅವನಿಗೆ ತಮ್ಮ ಅಭೀಪ್ಸೆಯನ್ನು ತಿಳಿಸಿದರು. ಆತ ಬೀಗವನ್ನು ತೆಗೆಯುವಂತಿಲ್ಲವೆಂದೂ, ಬೇಕಾದರೆ ಕಿಟಕಿಯ ಬಾಗಿಲನ್ನು ಸ್ವಲ್ಪ ಸರಿಸಿ ದರ್ಶನ ಮಾಡಬಹುದೆಂದು ತಿಳಿಸಿದ. ಮೆಲ್ಲನೆ ಕಿಟಕಿಯ ಬಾಗಿಲನ್ನು ಪಕ್ಕಕ್ಕೆ

ಸರಿಸಿ ಮರೆಯಾಗಿ ನಿಂತ. ನೆಲಮಾವು ಸ್ವಾಮಿಗಳು ಕಿಟಕಿಯಲ್ಲಿ ಬಗ್ಗಿ ನೋಡಿದರು. ಜೀರ್ಣಕಾಯರಾಗಿ, ಅವಧೂತರಂತೆ ಕಂಗೊಳಿಸುತ್ತಿದ್ದ ಗುರುದೇವರನ್ನು ಕೇವಲ ಕೆಲವೇ ದಿನಗಳ ಮೊದಲು ಶ್ರೀ ಗುರುದೇವರ ಸನ್ನಿಧಿಯಲ್ಲಿ ಕುಳಿತು ಭಾಷ್ಯ ಪ್ರವಚನವನ್ನು ಶ್ರವಣಮಾಡಿದ್ದ ನೆಲಮಾವು ಸ್ವಾಮಿಗಳಿಗೆ ಈಗ ಕೃಶರಾಗಿ ಸೊರಗಿಹೋಗಿದ್ದ ಗುರುದೇವರನ್ನು ನೋಡಿದೊಡನೆಯೇ ದುಃಖವುಮ್ಮಳಿಸಿತು. ನಿಂತಲ್ಲಿಯೇ ಅಡ್ಡಬಿದ್ದರು ಆ ಮಹಾ ತಪಸ್ವಿಗೆ.

ನಮಸ್ಕರಿಸಿ ಎದ್ದು ನಿಂತ ಸ್ವಾಮಿಗಳು ತಮ್ಮೆದುರು ಕಿಟಕಿಯ ಬಳಿಯಲ್ಲಿಯೇ ಗುರುದೇವರು ಬಂದು ದರ್ಶನ ಕೊಟ್ಟದ್ದನ್ನು ಕಂಡು ಆಶ್ಚರ್ಯಪಟ್ಟರು. ನೆಲಮಾವು ಸ್ವಾಮಿಗಳು ಮತ್ತೊಮ್ಮೆ ನಮಸ್ಕರಿಸಿ ಎದ್ದಾಗ "ಸಂಜೆ ನಾಲ್ಕಕ್ಕೆ ಬನ್ನಿ" ಎಂದು ಗುರುದೇವರು ಒಳಗಿನಿಂದಲೇ ಅಪ್ಪಣೆ ಮಾಡಿದರು.

ನೆಲಮಾವು ಸ್ವಾಮಿಗಳ ಉತ್ಸಾಹ, ಸಂತೋಷಕ್ಕೆ ಪಾರವಿರಲಿಲ್ಲ. ಸಂಜೆ ನಾಲ್ಕಕ್ಕೆ ಸರಿಯಾಗಿ ದರ್ಶನಕ್ಕೆ ಹೋದರು. ಆಗ ಅವರು ದರ್ಶಿಸಿದುದು ವಿಭೂತಿ ರುದ್ರಾಕ್ಷ ಕಾಷಾಯ ವಿಭೂಷಿತರಾಗಿ ಪೀಠಸ್ಥರಾಗಿದ್ದ ಗುರುವರ್ಯರನ್ನು. ನೆಲಮಾವು ಸ್ವಾಮಿಗಳಿಗೆ ಅಚ್ಚರಿಯಾಯಿತು. ಬೆಳಗ್ಗೆ ತಾವು ಕಂಡ ಅವಧೂತರನ್ನೂ ಈಗ ತಾವು ಕಾಣುತ್ತಿರುವ ಪುರುಷ ಶ್ರೇಷ್ಠನನ್ನೂ ಹೋಲಿಸಿಕೊಳ್ಳುತ್ತಾ ಸಾಷ್ಟಾಂಗ ಪ್ರಣಾಮ ಮಾಡಿದರು.

ಗುರುಗಳು ಪ್ರಶ್ನೆ ಮಾಡಿದರು; "ಈ ಬೆಳಗ್ಗೆ ಬಂದಿರಿ"

"ಹೌದು ಸ್ವಾಮಿ"

"ನೀವು ದೂರದೇಶ ಪ್ರವಾಸ ಮಾಡುತ್ತಿದ್ದೀರಿ ಅಲ್ಲವೇ?"

"ಹೌದು"

"ಇಲ್ಲಿಗೆ ಈಗ ಬರಲು ಕಾರಣ?"

"ಮಹಾಸ್ವಾಮಿಗಳವರ ಶರೀರವು ಸ್ವಸ್ಥವಾಗಿರಲಿಲ್ಲವೆಂದು ಸುದ್ದಿ ಕೇಳಿದೆ, ಸ್ವತಃ ದರ್ಶನ ಮಾಡೋಣವೆಂದು ತಕ್ಷಣವೇ ಬಂದುಬಿಟ್ಟೆ."

"ಹಾಗೋ, ಒಳ್ಳೆಯದಾಯಿತು. ಆದರೆ ಈ ಕಾರಣಕ್ಕಾಗಿ ನೀವು ನಿಮ್ಮ ಸಂಚಾರವನ್ನು ನಿಲ್ಲಿಸಬೇಕಾಗಿರಲಿಲ್ಲ. ನೀವು ಈ ಶರೀರ ಸ್ವಸ್ಥವಾಗಿರಲಿಲ್ಲವೆಂದಿರಿ. ಈ ಶರೀರದ ಸ್ವಭಾವವೇ ಆತ್ಮನಿಂದ ಹೊರಗಿರುವುದು. ಆದ್ದರಿಂದ ಅದು ಸ್ವಸ್ಥವಾಗಿಲ್ಲದಿರುವುದರಲ್ಲಿ, ಆತ್ಮನಲ್ಲಿ ಇಲ್ಲದಿರುವುದರಲ್ಲಿ ಆಶ್ಚರ್ಯವೇನೂ ಕಾಣದು. ಈ ತನುವಿಗೆ ಶರೀರ ಮತ್ತು ದೇಹ ಎಂಬೆರಡು ಹೆಸರುಗಳು ಇವೆ. "ಶರೀರ" ಶಬ್ದವು ಜೀರ್ಣವಾಗುವುದನ್ನು

ಸೂಚಿಸುತ್ತದೆ. "ದೇಹ" ಶಬ್ದವು ಬೆಳೆಯುವುದನ್ನು ಸೂಚಿಸುತ್ತದೆ. ಹುಟ್ಟಿದ ಕ್ಷಣದಿಂದಲೇ ದೇಹದ ಸ್ನಾಯುಗಳು ದೊಡ್ಡವೂ, ಬಲಿಷ್ಠವೂ, ದೃಢಯುತವೂ ಆಗಿ ಬೆಳೆಯಲು ಆರಂಭಿಸುತ್ತದೆ. ಶರೀರದ ಈ ಸ್ಥಿತಿಯಲ್ಲಿ ಅದು ದೇಹವೆನ್ನಿಸಿಕೊಳ್ಳುತ್ತದೆ. ಈ ಬೆಳವಣಿಗೆ ನಿಂತ ನಂತರ, ಅದು ಕ್ರಮವಾಗಿ ನಶಿಸಲು ಆರಂಭಿಸುತ್ತದೆ. ಈ ಸ್ಥಿತಿಯಲ್ಲಿ ಅದು ಶರೀರವೆನ್ನಿಸಿಕೊಳ್ಳುತ್ತದೆ.

ಆದ್ದರಿಂದ ಈ ದೇಹವು ತನ್ನ ಬೆಳವಣಿಗೆಯ ಸ್ಥಿತಿಯ ನಂತರ ಜೀರ್ಣ ಸ್ಥಿತಿಗೆ ಹೊರಡುತ್ತದೆ. ಪೂರ್ವಾರ್ಜಿತ ಕರ್ಮಕ್ಕನುಸಾರವಾಗಿ ಅದನ್ನು ಅದು ಅನುಭವಿಸುತ್ತದೆ. ಅದಕ್ಕಾಗಿ ಗಾಬರಿ ಪಡಬೇಕಾದ, ಖಿನ್ನರಾಗಬೇಕಾದ ಕಾರಣವಿಲ್ಲ. ನನ್ನ ಬಗ್ಗೆ ಚಿಂತೆ ಮಾಡದೆ ನಿಮ್ಮ ಯಾತ್ರಾ ಕಾರ್ಯ ಮುಂದುವರಿಸಿ."

ನೆಲಮಾವು ಸ್ವಾಮಿಗಳು ಗುರುದೇವರ ಈ ದಿವ್ಯವಾಣಿಯನ್ನಾಲಿಸಿ ಮನಸ್ಸಿನಲ್ಲಿಯೇ ಚಿಂತನ ಮಾಡುತ್ತಾ ತಮ್ಮ ಕಾರ್ಯಕ್ಷೇತ್ರಕ್ಕೆ ಹಿಂದಿರುಗಿದರು. ಶ್ರೀ ಗುರುವರ್ಯರು ಸಹ ಮತ್ತೆ ತಮ್ಮ ಏಕಾಂತ ವಾಸಕ್ಕೆ ಹಿಂದಿರುಗಿದರು.

ಗುರುಗಳ ಅರೋಗ್ಯ ವಿಷಯದಲ್ಲಿ ಚಿಂತೆಗೊಳಗಾದವರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರವರೂ ಒಬ್ಬರು. ಅವರು ಈ ವಿಷಯವಾಗಿ ಬಹಳ ಕಾಲ ಯೋಚಿಸಿದರು. ಕಡೆಗೆ ಗುರುಗಳ ಮಾನಸಿಕ ಆರೋಗ್ಯವನ್ನು ಪರೀಕ್ಷಿಸಿ ವರದಿಮಾಡಲು ಸೂಕ್ತ ಸಲಹೆ ನೀಡಲು, ಮನಃಶಾಸ್ತ್ರದ ಸುಪ್ರಸಿದ್ಧ ವಿದ್ವಾಂಸರಾಗಿದ್ದ ಡಾ॥ ಗೋವಿಂದಸ್ವಾಮಿಯವರನ್ನು ನಿಯೋಜಿಸಿದರು. ಮಹಾರಾಜರ ಆಣತಿಯಂತೆ ಗೋವಿಂದಸ್ವಾಮಿಯವರು ಶೃಂಗೇರಿಗೆ ಬಂದರು. ಗುರುಗಳು ಆಗ ಅಂತರ್ಮುಖಿಗಳಾಗಿಯೇ ಇದ್ದರು. ಗೋವಿಂದಸ್ವಾಮಿಯವರು ತಾವು ವೈದ್ಯರೆಂದು ಹೇಳಿಕೊಳ್ಳದೆ ಸಾಮಾನ್ಯ ಭಕ್ತನಾಗಿ ಬಂದಿರುವುದಾಗಿ ತೋರಿಸಿಕೊಂಡರು. ಸಾಧ್ಯವಾದರೆ ಗುರುಗಳಿದ್ದ ಸ್ಥಳವನ್ನು ಮತ್ತು ಗುರುಗಳನ್ನು ಒಮ್ಮೆ ನೋಡಬೇಕೆಂದುಕೊಂಡು ನರಸಿಂಹವನಕ್ಕೆ ಬಂದರು. ಎಲ್ಲರೂ ಆಶ್ಚರ್ಯರಾಗುವಂತೆ ಗುರುಗಳೇ ಬಹಿರ್ಮುಖರಾಗಿ ಹೊರಗೆ ಬಂದರು. ಹಲವಾರು ದಿನಗಳಿಂದ ಅಂತರ್ಮುಖ ಸ್ಥಿತಿಯಲ್ಲಿಯೇ ಇದ್ದ ಗುರುಗಳು, ಇದ್ದಕ್ಕಿದ್ದಹಾಗೆ ಬಹಿರ್ಮುಖರಾಗಿಬಿಟ್ಟರು. ಯಾಂತ್ರಿಕವಾಗಿ ಕೈ ಮುಗಿದು ನಿಂತುಕೊಂಡ ಗೋವಿಂದಸ್ವಾಮಿಯವರನ್ನು ಗುರುಗಳೇ "ತಾವೇ ತಾನೇ ನನ್ನನ್ನು ಪರೀಕ್ಷಿಸಲು ಬಂದಿರುವುದು" ಎಂದು ಕೇಳಿದರು.

ಈ ಪ್ರಶ್ನೆಯನ್ನು ಕೇಳಿದ ಕೂಡಲೇ ಗೋವಿಂದಸ್ವಾಮಿಯವರು, ಮಠದ ಅಧಿಕಾರಿಗಳು ತಬ್ಬಿಬ್ಬಾದರು. ಗೋವಿಂದಸ್ವಾಮಿಯವರು ಶ್ರೀ ಗುರುವರ್ಯರ ಮಾನಸಿಕ ಸ್ಥಿತಿಯನ್ನು ಪರೀಕ್ಷಿಸುವ ಸಲುವಾಗಿ ಶೃಂಗೇರಿಗೆ ಬರುವುದು ಕೇವಲ ಕೆಲವೇ ಜನಗಳಿಗೆ ಮಾತ್ರ ಗೊತ್ತಿತ್ತು. ಅವರಲ್ಲಿ ಯಾರೂ ಈ ವಿಷಯವನ್ನು ಗುರುಗಳಿಗೆ ತಿಳಿಸಿರಲಿಲ್ಲ. ಗಂಭೀರ ಮುಖ ಮುದ್ರೆಯುಳ್ಳ ಆ ತೇಜೋಮೂರ್ತಿಯನ್ನು ದರ್ಶಿಸಿದ ಗೋವಿಂದಸ್ವಾಮಿ ಈ ಪ್ರಶ್ನೆಯನ್ನು ಕೇಳಿ ವಿಸ್ಮಿತರಾದರು.

ಶ್ರೀ ಗುರುಗಳು ಹಸನ್ಮುಖರಾಗಿ ಗೋವಿಂದಸ್ವಾಮಿಯವರೊಡನೆ ಸಂಭಾಷಣೆ ನಡೆಸಿದರು. ಆ ಸಂಭಾಷಣೆಯಲ್ಲಿಯೂ, ಆ ಬಳಿಕವೂ ಕೆಲವು ದಿನಗಳು ಶೃಂಗೇರಿಯಲ್ಲಿದ್ದು ನಿತ್ಯವೂ ಗುರು ದರ್ಶನ ಪಡೆಯುತ್ತಿದ್ದ ಗೋವಿಂದಸ್ವಾಮಿಗಳಿಗೆ ಗುರುವರ್ಯರ ನಡವಳಿಕೆಯಲ್ಲಿ ವ್ಯತ್ಯಾಸವಾಗಲೀ, ಮಾತುಕತೆಗಳಲ್ಲಿ ವೈಪರೀತ್ಯವಾಗಲೀ ಕಾಣಲಿಲ್ಲ. ಬುದ್ಧಿಭ್ರಮಣೆ ಎಂಬ ಅನೇಕರ ಸಂದೇಹಕ್ಕೆ ಯಾವ ಪುಷ್ಟಿಯೂ ದೊರಕಲಿಲ್ಲ.

ಅಲ್ಲಿಯವರಿಗೆ ಧಾರ್ಮಿಕ ವಿಷಯಗಳಲ್ಲಿಯೂ, ಆಧ್ಯಾತ್ಮಿಕ ತತ್ವಗಳಲ್ಲಿಯೂ ನಂಬಿಕೆಗಳನ್ನು ಗಳಿಸದಿದ್ದ ಗೋವಿಂದ ಸ್ವಾಮಿಗಳು ಶ್ರೀ ಗುರುಗಳಿಂದ ಪ್ರಭಾವಿತರಾಗಿ ಅವರ ಸನ್ನಿಧಿಯಲ್ಲಿ ಹೊಸ ಬೆಳಕನ್ನು ಕಂಡರು. ಆ ಮೊದಲು ಸಂಸ್ಕೃತವನ್ನೇ ಅರಿಯದಿದ್ದ ಗೋಪಾಲಸ್ವಾಮಿಗಳು ಶ್ರೀ ಗುರುವರ್ಯರ ಉಪದೇಶದಂತೆ ಸಂಸ್ಕೃತವನ್ನು ಮೊದಲಿನಿಂದ ಕಲಿತು, ಗೀತೆ, ಉಪನಿಷತ್ತುಗಳನ್ನು ಸಂಸ್ಕೃತ ಮೂಲದಲ್ಲಿಯೇ ಓದಿ ಕಲಿಯುವಷ್ಟು ಜ್ಞಾನ ಸಂಪಾದನೆಯನ್ನು ಮಾಡಿದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಯವರ ವಾಣಿಯಲ್ಲಿ ಹೊಸ ಬೆಳಕನ್ನು ಕಂಡ ಅವರು ತಮ್ಮ ವೈಜ್ಞಾನಿಕ ಮನೋವೃತ್ತಿಗೆ ಕೊರತೆಯಾಗಿದ್ದ ಆಧ್ಯಾತ್ಮಿಕ ಬೆಳಕನ್ನು ಕಂಡರು. ಶ್ರೀ ಗುರುಗಳಿಂದ ಆಶೀರ್ವಾದ ಅನುಗ್ರಹಗಳನ್ನು ಪಡೆದು ಹಿಂತಿರುಗಿದ ಅವರು ತಮ್ಮ ವರದಿಯನ್ನು ಕೂಲಂಕಷವಾಗಿ ತಯಾರಿಸಿ ಶ್ರೀ ಮನ್ಮಹಾರಾಜರಿಗೆ ಒಪ್ಪಿಸಿದರು. ಶ್ರೀ ಗುರುವರ್ಯರಲ್ಲಿ ಬುದ್ಧಿಭ್ರಮಣೆ ಎಂದು ಹೇಳಬಹುದಾದ ಯಾವ ಚಿಹ್ನೆಯೂ ಇಲ್ಲವೆಂದೂ ಮತ್ತು ಗುರುವರ್ಯರ ಮನಸ್ಥಿತಿಯು ವೈಜ್ಞಾನಿಕ ಸಾಧನಗಳ ಅಳತೆಗೆ ಸಿಲುಕದೆಂದೂ ವರದಿ ಮಾಡಿದರು.

ಶ್ರೀ ಗುರುಗಳ ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಪರೀಕ್ಷಿಸಲೆಂದೇ ಬಂದಿದ್ದ ಮತ್ತೊಬ್ಬ ವೈದ್ಯರು ಸುಮಾರು ಹದಿನೈದು ದಿನಗಳ ಕಾಲ ಶೃಂಗೇರಿಯಲ್ಲಿ ಇದ್ದರು. ನಿತ್ಯವೂ ಗುರುಗಳ ದರ್ಶನವನ್ನು ಪಡೆಯುತ್ತಿದ್ದು, ಶ್ರೀ ಗುರುವರ್ಯರನ್ನು ಪರೀಕ್ಷಿಸಲು ಇನ್ನು ಸಾಧ್ಯವಾಗಲಿಲ್ಲವೆಂದು ಮತ್ತೆ ಅವರಲ್ಲಿ ಯಾವ ವ್ಯತ್ಯಾಸವೂ ಕಾಣುತ್ತಿಲ್ಲವೆಂದು ಗುರುಗಳ ಅರೋಗ್ಯ ತಪಾಸಣೆಗಾಗಿ ತಮ್ಮನ್ನು ಕಳುಹಿಸಿದ್ದ, ತಮ್ಮ ಮಿತ್ರವೃಂದದವರಿಗೆ ನಿತ್ಯವೂ ತಮ್ಮ ವರದಿಯನ್ನು ಕಳುಹಿಸುತ್ತಿದ್ದರು.

ಎಷ್ಟು ದಿನ ಕಾದರೂ, ಪರೀಕ್ಷಿಸುವ ಅವಕಾಶವೇ ಸಿಕ್ಕದಿದ್ದಲ್ಲಿ ಏನು ಮಾಡುವುದು? ವೃತ್ತಿಯಲ್ಲಿ ವೈದ್ಯರಾದವರು ವೃತ್ತಿಯನ್ನು, ಎಷ್ಟು ದಿನ ಬಿಟ್ಟಿರಲು ಸಾಧ್ಯ? ಊರಿಗೆ ಹಿಂತಿರುಗುವ ಸಂಕಲ್ಪ ಮಾಡಿ, ಗುರುಗಳಲ್ಲಿ ನಿವೇದಿಸಿದರು, "ಅಪ್ಪಣೆಯಾದರೆ ನಾನು ನಾಳೆ ಮರುಪ್ರಯಾಣ ಮಾಡುತ್ತೇನೆ."

ಶ್ರೀ ಗುರುವರ್ಯರು ಹಸನ್ಮುಖದಿಂದ "ಏಕೆ, ತಾವು ಬಂದ ಕೆಲಸವಾಯಿತೇ?" ಎಂದು ಕೇಳಿದರು.

ವೈದ್ಯರು ಏನೆಂದು ಉತ್ತರ ಕೊಟ್ಟಾರು? ಆಯಿತೆಂದರೆ ಸುಳ್ಳು ಹೇಳಿದಂತಾಗುತ್ತದೆ. ಆಗಲಿಲ್ಲವೆಂದರೆ, ಕೆಲಸವಾಗದೆ ಏಕೆ ಹೊರಡುತ್ತೀರೆಂದು ಗುರುವರ್ಯರು ಕೇಳಬಹುದು.

ಸ್ವಲ್ಪ ಯೋಚಿಸಿದ ವೈದ್ಯರು, "ಊರಿನಲ್ಲಿ ತುಂಬಾ ಕೆಲಸ ನಿಂತು ಹೋಗಿದೆ. ಅದಕ್ಕಾಗಿ ಪ್ರಯಾಣ ಮಾಡಲೇಬೇಕಾಗಿದೆ. ಮಹಾಸನ್ನಿಧಾನವು ಆಶೀರ್ವದಿಸಿ ಕಳಿಸಿಕೊಡಬೇಕು" ಎಂದು ನಮ್ರರಾಗಿ ನುಡಿದರು.

ಶ್ರೀ ಶ್ರೀಗಳವರು ವೈದ್ಯರಿಗೆ ಪ್ರಯಾಣ ಮಾಡಲು ಅನುಮತಿಯಿತ್ತು ಫಲ ಮಂತ್ರಾಕ್ಷತೆಯನ್ನು ಅನುಗ್ರಹಿಸಿದರು. ವೈದ್ಯರು ಸಾಷ್ಟಾಂಗವೆರಗಿ ಇನ್ನೇನು ಹೊರಡಬೇಕು, ಅಷ್ಟರಲ್ಲಿ ಶ್ರೀ ಶ್ರೀಗಳವರು "ತಮ್ಮ ತಾಯಿಯವರು ಆರೋಗ್ಯವಾಗಿದ್ದಾರೆಯೇ?" ಎಂದು ಪ್ರಶ್ನಿಸಿದರು. ವೈದ್ಯರು ಆ ಪ್ರಶ್ನೆಯನ್ನು ಕೇಳಿ ಅವಾಕ್ಕಾದರು. ಏಕೆಂದರೆ ಬಹಳ ದಿನಗಳ ಹಿಂದೆ ವೈದ್ಯರ ತಾಯಿಗೆ ಹೊಟ್ಟೆಯ ನೋವು ಬಂದು ಬಹಳ ನರಳಿದ್ದರು. ಯಾವುದೇ ಅನೇಕ ವೈದ್ಯರು ಪರೀಕ್ಷಿಸಿ ಔಷಧಿಗಳನ್ನು ಕೊಟ್ಟಿದ್ದರೂ ಸಹ ಆಕೆಯ ಹೊಟ್ಟೆಯ ನೋವು ಗುಣವಾಗಿರಲಿಲ್ಲ. ಸ್ವತಃ ಮಗನೇ ವೈದ್ಯನಾಗಿದ್ದರೂ ಏನೂ ಮಾಡಲಾಗದೆ ಪರಿತಪಿಸುತ್ತಿದ್ದರು. ಆಗ ಆ ತಾಯಿಯೇ, ತನ್ನ ಮಗನನ್ನು ಕರೆದು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರಲ್ಲಿ ತನ್ನ ರೋಗದ ವಿಷಯವಾಗಿ ಅರಿಕೆ ಮಾಡಿಕೊಂಡು ಅವರಿಂದ ಪ್ರಸಾದವನ್ನು ತರುವಂತೆ ಕಳಿಸಿದ್ದರು. ಅದೇ ಪ್ರಕಾರ ಡಾಕ್ಟರರು ಗುರುಗಳ ಬಳಿ ತಮ್ಮ ತಾಯಿಯ ರೋಗದ ವಿಷಯವನ್ನು ತಿಳಿಸಿ ಆಶೀರ್ವಾದಪೂರ್ವಕವಾದ ಭಸ್ಮವನ್ನು ಪಡೆದುಕೊಂಡು ತಮ್ಮ ತಾಯಿಗೆ ನೀಡಿದ್ದರು. ಅದನ್ನು ಭಕ್ತಿಯಿಂದ ಸೇವಿಸಿದ ವೈದ್ಯರ ತಾಯಿ ಉದರ ಬೇನೆಯಿಂದ ಮುಕ್ತರಾಗಿ ಸಂಪೂರ್ಣ ಆರೋಗ್ಯವಂತರಾಗಿದ್ದರು.

ಶ್ರೀ ಶ್ರೀಗಳವರು ತಮ್ಮ ತಾಯಿಯ ಆರೋಗ್ಯವನ್ನು ಕೇಳಿದೊಡನೆಯೇ ಡಾಕ್ಟರಿಗೆ ಮಿಂಚು ಹೊಳೆದಂತಾಯಿತು, ತಮ್ಮ ತಾಯಿಯ ಹೊಟ್ಟೆಯ ನೋವಿಗೆ ಔಷಧಿ ಕೊಡಲಾರದ ತಾನು, ಶ್ರೀ ಗುರುವರ್ಯರ ಆರೋಗ್ಯವನ್ನು ಪರೀಕ್ಷಿಸಲು ಮತ್ತು ಗುಣಪಡಿಸಲು ಬಂದದ್ದು ಎಂತಹ ಮೂರ್ಖತನ ಎಂದುಕೊಂಡರು. ನಂತರ ಗುರುಗಳಿಗೆ ಪ್ರಣಾಮ ಮಾಡಿ ಪ್ರಯಾಣ ಮಾಡಿದರು.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ದರ್ಶನ ಮಾತ್ರದಿಂದಲೇ ಅನೇಕರಿಗೆ ತಮ್ಮ ಸಂಕಷ್ಟಗಳು ಪರಿಹಾರವಾಗುತ್ತಿದ್ದವು. ಅವರು ಅಂತರ್ಮುಖಿಗಳಾಗಿದ್ದು ಒಮ್ಮೊಮ್ಮೆ ಸಂದರ್ಶನ ಕೊಡುತ್ತಿದ್ದಾಗ, ಅದಕ್ಕಾಗಿಯೇ ಕಾದಿರುತ್ತಿದ್ದ ಶಿಷ್ಯರಿಗೆ ಗುರುವರ್ಯರ ಕೇವಲ ಒಂದು ಮಂದಹಾಸ ಸಾಕಾಗಿತ್ತು ಅನಂತ ತೃಪ್ತಿಯನ್ನು, ಶಾಂತಿಯನ್ನು ನೀಡಲು. ಅವರ ಈ ಮೌನವು ಪ್ರವಚನಕ್ಕಿಂತಲೂ ಹೆಚ್ಚು ಅರ್ಥಗರ್ಭಿತವಾಗಿರುತ್ತಿತ್ತು. ಸಾಧನೆ ಮತ್ತು ತಪಸ್ಸಿನಿಂದ ಅವರ ಶರೀರವು ಪ್ರಭಾವಳಿಯಂತೆ ಕಂಗೊಳಿಸುತ್ತಿತ್ತು.

ಗುರುಗಳು ತಮ್ಮ ಬಳಿ ಬಂದವರ ಅಭಿಪ್ರಾಯವನ್ನು ಖಂಡಿಸುವುದಾಗಲೀ, ವಿರೋಧಿಸುವುದಾಗಲೀ ಮಾಡುತ್ತಿರಲಿಲ್ಲ. ಅದರ ಬದಲಾಗಿ, ಅವರಲ್ಲಿರುವ ಯಾವುದಾದರೂ ಒಳ್ಳೆಯ ಗುಣವನ್ನು ಗುರುತಿಸಿ, ಅದನ್ನು ಬೆಳಸಿಕೊಳ್ಳಲು ಪ್ರೋತ್ಸಾಹಿಸುತ್ತಿದ್ದರು. ಗುರುವರ್ಯರನ್ನು ಕೆಲವೇ ನಿಮಿಷಗಳು ಭೇಟಿ ಮಾಡಿದರೂ, ಅವರ ಆಶೀರ್ವಾದದಿಂದ, ಸಾಕಷ್ಟು ಉತ್ಸಾಹಿಗಳಾಗುತ್ತಿದ್ದರು.

ತಮ್ಮಲ್ಲಿ ವಿದ್ಯಾರ್ಜನೆಗೆ ಮತ್ತು ಜ್ಞಾನಾರ್ಜನೆಗೆ ಬಂದವರನ್ನು ಗುರುಗಳು ಪರಮ ವಿಶ್ವಾಸದಿಂದ ಕಾಣುತ್ತಿದ್ದರು. ಪ್ರಾಮಾಣಿಕರಾದ ವಿದ್ಯಾರ್ಥಿಗಳಿಗೆ ತಾವೇ ಬ್ರಹ್ಮಸೂತ್ರ ಭಾಷ್ಯ ಪಾಠವನ್ನೂ, ವೇದಾಂತದ ಗಹನವಾದ ಭಾಗಗಳನ್ನು ಬೋಧಿಸುತ್ತಿದ್ದರು. ಪಾಠದ ಯಾವುದಾದರೂ ಭಾಗವು ಅರ್ಥವಾಗಲಿಲ್ಲವೆಂದರೆ ಶಿಷ್ಯನಿಗೆ ಆ ಪಾಠವನ್ನು ಮತ್ತೊಮ್ಮೆ ಉಚ್ಚಸ್ವರದಲ್ಲಿ ಓದುವಂತೆ ಹೇಳುತ್ತಿದ್ದರು, ತಾನು ಓದುತ್ತಿರುವ ಭಾಗ ಪೂರ್ಣವಾಗುವ ಮೊದಲೇ ಅದರ ಅರ್ಥ ಆತನಿಗೆ ಹೃದ್ಯವಾಗಿಬಿಡುತ್ತಿತ್ತು.

ಅವರ ಪರಮ ಶಿಷ್ಯರಾಗಿ ಅವರಿಂದ ಉಪದೇಶವನ್ನು ಪಡೆದವರಲ್ಲಿ ಎಲ್ಲಾ ಧರ್ಮ, ಜಾತಿಯ ಎಲ್ಲಾ ವರ್ಗದವರೂ ಅನೇಕರಿದ್ದರು. ಪ್ರತಿ ವ್ಯಕ್ತಿಯೂ ಅವನು ಯಾವ ಯಾವ ಮತದಲ್ಲಿ ಜನಿಸಿರುವನೋ ಆ ಮತದಲ್ಲೇ ಗುರಿಯನ್ನನುಸರಿಸುವಂತೆ ಮಾರ್ಗದರ್ಶನ ಮಾಡುವುದು ಗುರುವರ್ಯರ ವೈಶಿಷ್ಟ್ಯವಾಗಿತ್ತು. ಅನ್ಯಮತೀಯರು ಸಹ ಆಚಾರ್ಯರಿಂದ ಸಲಹೆ ಸಹಾಯಗಳನ್ನು ಪಡೆದು, ತಮ್ಮ ತಮ್ಮ ಮತಗಳಲ್ಲಿಯೇ ಹೆಚ್ಚಿನ ಆಸಕ್ತಿ ವಹಿಸಿ ಸಾಧನೆ ಮಾಡುತ್ತಿದ್ದರು.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರು ಅಂತರ್ಮುಖಿಗಳಾಗಿದ್ದಾಗಲಂತೂ ಯಾರಿಗಾದರೂ ದರ್ಶನಲಾಭವಾಗುವುದೇ ಅಪರೂಪವಾಗಿತ್ತು. ಬಹಿರ್ಮುಖಿಗಳಾಗಿದ್ದಾಗಲೂ ಸಹ ಒಮ್ಮೊಮ್ಮೆ ಯಾರಾದರು ಬಂದರೆ ದರ್ಶನ ಸಿಕ್ಕುತ್ತಿರಲಿಲ್ಲ. ಇದರಿಂದ ಬಂದವರು ನಿರಾಸೆಯಿಂದಲೂ, ದುಃಖದಿಂದಲೂ ಹಿಂತಿರುಗಿ ಹೋಗುತ್ತಿದ್ದರು. ಅವರಲ್ಲಿ ಬರುತ್ತಿದ್ದವರಲ್ಲಿ ಕಷ್ಟದಲ್ಲಿರುವವರೂ, ಪ್ರಾಪಂಚಿಕ ವಿಷಯಗಳಲ್ಲಿ ಅನುಗ್ರಹ ಬಯಸುತ್ತಿದ್ದವರು, ಅಧ್ಯಾತ್ಮ ವಿಷಯಗಳಲ್ಲಿ ಮಾರ್ಗದರ್ಶನಕ್ಕಾಗಿ ಬಂದವರು, ಸಂದೇಹ ನಿವೃತ್ತಿಗಾಗಿ ಬಂದವರು ಹೀಗೆ ಅನೇಕರಿರುತ್ತಿದ್ದರು. ಅವರೆಲ್ಲರನ್ನು ಸಹ ಆತ್ಮೀಯತೆಯಿಂದ ಮಾತನಾಡಿಸಿ ದೈವಕೃಪೆ ಅವರೆಲ್ಲರಿಗೂ ಉಂಟಾಗುವಂತೆ ಆಶೀರ್ವದಿಸುತ್ತಿದ್ದರು.

ಮೊದಲಿನಿಂದಲೂ ಗುರುವರ್ಯರು ಏಕಾಂತ ಪ್ರಿಯರಾಗಿದ್ದರು. ಏಕಾಂತವಾಗಿರುವುದರಿಂದ ಅವರು ಹೆಚ್ಚು ತಪೋಮಗ್ನರಾಗಿರಲು ಸಾಧ್ಯವಾಗಿತ್ತು. ಜನರಿಂದ ದೂರ ಸರಿಯಲು ಇನ್ನೂ ಒಂದು ಕಾರಣವಿತ್ತು. ಸೋಗು, ಡಂಬಾಚರಣೆ, ವ್ಯರ್ಥಮಾತು, ಟೀಕೆ ಮುಂತಾದವುಗಳು ಅವರಿಗೆ ಸರಿಬೀಳುತ್ತಿರಲಿಲ್ಲ. ಕೇವಲ ಕುತೂಹಲಕ್ಕಾಗಿ ತಮ್ಮನ್ನು ಕಾಣಬಂದವರಿಗೂ, ಅಥವಾ ತಮ್ಮ ಹೆಗ್ಗಳಿಕೆಯನ್ನು ಪ್ರದರ್ಶನ ಮಾಡಲು ಬಂದವರಿಗೂ ಅವರು ಭೇಟಿಯನ್ನೇ ನೀಡುತ್ತಿರಲಿಲ್ಲ. ಆದರೆ ನಿಜವಾಗಿಯೂ ದರ್ಶನ ಬಯಸಿದವರಿಗೆ, ನಿಷ್ಕಪಟಿಗಳಿಗೆ ಮತ್ತು ಅಧ್ಯಾತ್ಮಿಕ ಸಲಹೆಗಳ ಅಗತ್ಯವಿರುವವರಿಗೆ ಹೇಗಾದರೂ ಅವರ ದರ್ಶನ ಲಭ್ಯವಾಗುತ್ತಿತ್ತು.

ಆಪ್ತ ವರ್ಗದಲ್ಲಿದ್ದು ಸೇವೆಯಲ್ಲಿದ್ದವರಾರಾದರೂ ಗುರುಗಳಲ್ಲಿ "ತಮ್ಮ ದರ್ಶನವನ್ನು ಬಯಸಿ ಬಂದವರು ಖಿನ್ನರಾಗಿ ಹಿಂತಿರುಗುತ್ತಿದ್ದಾರೆ. ತಮ್ಮ ಕೃಪಾಶೀರ್ವಾದ ಉಪದೇಶಗಳನ್ನು ಪಡೆಯಬೇಕೆಂದು ಬಂದವರು ನಿರಾಶರಾಗಿ ಹಿಂತಿರುಗುತ್ತಿದ್ದಾರೆ, ದರ್ಶನವು ಸುಗಮವಾದಲ್ಲಿ ಎಲ್ಲರಿಗೂ ಸಂತೋಷವಾಗುತ್ತದೆ" ಎಂದು ವಿನಂತಿ

ಮಾಡಿಕೊಂಡರೆ "ನನ್ನನ್ನು ಕಾಣಬೇಕೆಂದು ಬರುವವರಿಗೆ ಕೇವಲ ನನ್ನನ್ನು ನೋಡುವ ಕುತೂಹಲವೋ ಅಥವಾ ಯಾವ ಪ್ರಯೋಜನಕ್ಕೂ ಬಾರದ ವಿಷಯಗಳ ಪ್ರಸ್ತಾಪವೋ ವಿನಾ ಬೇರೆ ಏನೂ ಇರದು. ಇಂತಹವರಿಗೆ ಭೇಟಿ ಕೊಡುವುದರಿಂದ ಪ್ರಯೋಜನವೇನು?" ಎಂದು ಕೇಳುತ್ತಿದ್ದರು.

"ಇರಬಹುದು. ಆದರೆ ತಮ್ಮಿಂದ ನಿಜವಾಗಿಯೂ ಮಾರ್ಗದರ್ಶನ ಬಯಸುವವರೂ ಇರುತ್ತಾರಲ್ಲವೇ?"

"ನಮ್ಮಿಂದ ಅವರು ಬಯಸುವ ಸಹಾಯ ವೈದ್ಯನ ಕೆಲಸವೋ, ಮಾಂತ್ರಿಕನ ಕೆಲಸವೋ ತಾನೇ?"

"ಆಧ್ಯಾತ್ಮಿಕ ವಿಷಯದಲ್ಲಿ ಮಾರ್ಗದರ್ಶನ ಬೇಕಾದವರೂ ಇರುತ್ತಾರಲ್ಲವೇ?"

"ಪ್ರಾಮಾಣಿಕವಾಗಿ ಆಧ್ಯಾತ್ಮಿಕ ವಿಷಯಗಳಲ್ಲಿ ಆಸಕ್ತಿ ಇರುವವರು ಹೇಗಾದರೂ ನಮ್ಮನ್ನು ಕಂಡೇ ಕಾಣುತ್ತಾರೆ. ನಮ್ಮ ಭೇಟಿಯನ್ನು ಪಡೆದೇ ಪಡೆಯುತ್ತಾರೆ" ಎನ್ನುತ್ತಿದ್ದರು ಗುರುವರ್ಯರು.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರು ಸಂಚಾರದಿಂದ ಹಿಂತಿರುಗಿ ಬಂದ ಬಳಿಕ ಹೆಚ್ಚೆಚ್ಚು ಏಕಾಂತವಾಸಿಗಳಾಗುತ್ತಾ ಬಂದರು. ಅವರ ತಪಶ್ಚರ್ಯೆ ಹೆಚ್ಚೆಚ್ಚು ಕಠಿಣವೂ, ಉಗ್ರವೂ ಆಗುತ್ತಾ ಬಂದಿತು. ಅವರು ತಪೋನಿರತರಾದಂತೆಲ್ಲಾ ಜನವೃಂದದಿಂದ ದೂರವಾಗುತ್ತಾ ಬಂದರು, ಅಂತರ್ಮುಖಿಗಳಾಗುತ್ತಾ ಬಂದರು. ಮಠದ ಲೌಕಿಕ ವ್ಯವಹಾರಗಳಲ್ಲಿ ಸಲಹೆ, ತಿಳಿವಳಿಕೆ, ಮಾರ್ಗದರ್ಶನ ಕೊಡುವುದನ್ನು ನಿಲ್ಲಿಸಿಬಿಟ್ಟರು. ಪ್ರಾಪಂಚಿಕ ವಿಷಯಗಳಲ್ಲಿ ಸಂಪೂರ್ಣ ನಿರಾಸಕ್ತರಾಗಿ ಬಿಟ್ಟರು. ಅವರ ಏಕಾಂತಪ್ರಿಯತೆ ಎಷ್ಟಿತ್ತೆಂದರೆ, ನವರಾತ್ರಿಯ ಸಂದರ್ಭದಲ್ಲಿ ಶಾರದಾಂಬೆಯ ದರ್ಶನಕ್ಕೆ ಯಾವ ಜನಜಂಗುಳಿಯೂ ಇರದ ಸಮಯವನ್ನು ನೋಡಿ ರಾತ್ರಿ ೧೧ ಗಂಟೆಯ ನಂತರ ಬರುತ್ತಿದ್ದರು. ಆದರೂ ಮಠದ ವಿದ್ಯಾರ್ಥಿಗಳು ಕದ್ದು ಮುಚ್ಚಿ ಮರೆಯಲ್ಲಿ ನಿಂತು ಗುರುಗಳ ದರ್ಶನ ಪಡೆಯುತ್ತಿದ್ದರು. ಗುರುಗಳು ಹೀಗೆಯೇ ಸದಾಕಾಲವೂ ಇದ್ದು ಬಿಟ್ಟರೆ ಮಠದ ಆಡಳಿತದಲ್ಲಿ ಸೂಕ್ತ ನಿರ್ದೇಶನ ನೀಡುವವರಾರು ಎಂದು ಮಠದ ಕಾರ್ಯಭಾರಿಗಳಿಗೆ ಚಿಂತೆಯಾಯಿತು.

ಗುರುವರ್ಯರು ಬಹಿರ್ಮುಖರಾಗಿದ್ದು ತಮ್ಮ ದೈನಂದಿನ ಅನುಷ್ಠಾನಗಳಲ್ಲಿ ನಿರತರಾಗಿದ್ದಾಗ, ಈ ಯೋಚನೆಯನ್ನು ಶಿಷ್ಯರು ನಮ್ರವಾಗಿ ಬಿನ್ನವಿಸಿಕೊಂಡರು. ಈ ವಿಷಯವಾಗಿ ಮೊದಲೇ ತೀರ್ಮಾನಮಾಡಿಕೊಂಡಿದ್ದಂತೆ ಗುರುಗಳು ತಾವು ಶಿಷ್ಯ ಪರಿಗ್ರಹ ಮಾಡುವುದಾಗಿ ತಿಳಿಸಿ ಯೋಗ್ಯ ವಟುವನ್ನು ಆರಿಸುವಂತೆ ಮಠದ ಕಾರ್ಯಭಾರಿಗಳಿಗೆ ಆಣತಿಯಿತ್ತರು.

ಶ್ರೀ ಗುರುಗಳ ಆಣತಿಯಂತೆ ಶ್ರೀ ಶ್ರೀನಿವಾಸ ಎಂಬ ಬಾಲಕನನ್ನು ಶೃಂಗೇರಿಗೆ ಕರೆಯಿಸಿಕೊಂಡು ಅಲ್ಲಿಯೇ ಅವನಿಗೆ ಉಪನಯನವನ್ನೂ ನೆರವೇರಿಸಿದರು. ಪ್ರೌಢವಿದ್ಯೆ ಮತ್ತು ಶಾಸ್ತ್ರಗಳಲ್ಲಿ ತರಬೇತಿ ಕೊಡಲು ಆರಂಭಿಸಿದರು. ಶ್ರೀನಿವಾಸರು ೧೯೩೧ನೇಯ ಮೇ ೨೨ರಲ್ಲಿ ಶ್ರೀ ಅಭಿನವ ವಿದ್ಯಾತೀರ್ಥರೆಂಬ ಅಭಿಧಾನದಿಂದ ಆಶ್ರಮ ಪ್ರವೇಶಿಸಿದರು.

ಶಿಷ್ಯ ಸ್ವೀಕಾರದ ದಿನವೇ ಶ್ರೀ ಚಂದ್ರಶೇಖರಭಾರತೀ ಸ್ವಾಮಿಗಳವರು ಮತ್ತು ಬಾಲ ಯತಿವರ್ಯರು ಉತ್ಸವದಲ್ಲಿ ಹೊರಟು ಶಿಷ್ಯರಿಗೆಲ್ಲಾ ದರ್ಶನವನ್ನು ಕೊಡಬೇಕಾಗಿತ್ತು. ಅದಕ್ಕೆ ಸಕಲ ಸಿದ್ಧತೆಗಳು ನಡೆದಿದ್ದುವು. ಮುಂಬದಿಯಲ್ಲಿ ಸ್ವರ್ಣಪಲ್ಲಕ್ಕಿಯು, ಅದರ ಹಿಂಬದಿಯಲ್ಲಿ ರಜತಪಲ್ಲಕ್ಕಿಯು ಇಡಲ್ಪಟ್ಟವು. ಯತಿಗಳಿಬ್ಬರೂ ಶ್ರೀ ಶಾರದಾಂಬಾ ದರ್ಶನವನ್ನು ಪಡೆದು ಅಲಂಕರಿಸಲ್ಪಟ್ಟಿದ್ದ ಪಲ್ಲಕ್ಕಿಗಳತ್ತ ಬಂದಿದ್ದರು. ಬಾಲಯತಿಯನ್ನು ನಡೆಸಿಕೊಂಡು ಗಂಭೀರವಾಗಿ ಬರುತ್ತಿದ್ದ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರು ತಕ್ಷಣವೇ ಶಿಷ್ಯರ ಕೈಯನ್ನು ಬಿಟ್ಟು ಹಿಂಬದಿಯಲ್ಲಿದ್ದ ಬೆಳ್ಳಿಯ ಪಲ್ಲಕ್ಕಿಯಲ್ಲಿ ಕುಳಿತುಬಿಟ್ಟರು. ವಾಡಿಕೆಯಂತೆ ಹಿರಿಯ ಗುರುಗಳು ಸ್ವರ್ಣಪಲ್ಲಕ್ಕಿಯಲ್ಲಿಯೂ ಕಿರಿಯ ಗುರುಗಳು ರಜತ ಪಲ್ಲಕ್ಕಿಯಲ್ಲಿಯೂ ಕೂರಬೇಕಾಗಿತ್ತು. ಆದರೆ ಹಿರಿಯ ಗುರುಗಳು ರಜತ ಪಲ್ಲಕ್ಕಿಯಲ್ಲಿ ಕುಳಿತು ಕಿರಿಯವರಿಗೆ ಸ್ವರ್ಣಪಲ್ಲಕ್ಕಿಯಲ್ಲಿ ಕೂರುವಂತೆ ಸೂಚನೆಯಿತ್ತರು. ಶಿಷ್ಯರೆಲ್ಲರೂ ಗಲಿಬಿಲಿಗೊಂಡರು. ಹಲವು ಶಿಷ್ಯರು ಗುರುಗಳಲ್ಲಿ ದೈನ್ಯದಿಂದ ಪ್ರಾರ್ಥಿಸಿದರು, ಸ್ವರ್ಣ ಪಲ್ಲಕ್ಕಿಯಲ್ಲಿ ಕೂರುವಂತೆ. ಆದರೆ ಪ್ರಯೋಜನವಾಗಲಿಲ್ಲ. ಕೊನೆಗೆ ಮಠದ ಕಾರ್ಯಭಾರಿಯಾಗಿದ್ದ ಶ್ರೀಕಂಠಶಾಸ್ತ್ರಿಗಳೇ ವಿಜ್ಞಾಪನೆ ಮಾಡಿಕೊಂಡರು. ಆಗ ಶ್ರೀ ಗುರುವರ್ಯರು "ಇಂದಿನ ಕಾರ್ಯಕಲಾಪಗಳ ಪ್ರಾಮುಖ್ಯತೆಯನ್ನೇ ಮರೆತಿರೇನು? ಇಂದಿನಿಂದ ಈ ಪೀಠಕ್ಕೆ ಸಲ್ಲಬೇಕಾದ ಎಲ್ಲಾ ಮರ್ಯಾದೆ, ಗೌರವ, ಲಾಂಛನ, ಬಿರುದು ಬಾವಲಿಗಳು ಅವರಿಗೆ ಸಲ್ಲಬೇಕು, ನಮಗಲ್ಲ, ತಿಳಿಯಿತೇ?" ಎಂದರು. ತಾವು ಇಚ್ಛಿಸಿದಂತೆಯೇ ಶ್ರೀ ಗುರುವರ್ಯರು ಶಿಷ್ಯ ಸ್ವೀಕಾರವಾದ ದಿನವೇ ಮಠದ ಎಲ್ಲಾ ಲೌಕಿಕ, ವೈದಿಕ ವ್ಯವಹಾರಾದಿಗಳನ್ನು, ಬಿರುದು ಬಾವಲಿಗಳನ್ನೂ ಕಿರಿಯ ಸ್ವಾಮಿಗಳಿಗೆ ವಹಿಸಿ ತಾವು ಸ್ವತಂತ್ರರಾಗಿ ಸ್ವಚ್ಛಂದವಾಗಿ ಆತ್ಮವಿಲಾಸನಿರತರಾದರು.

ಬಾಲಯತಿಗಳ ಸರ್ವತೋಮುಖವಾದ ಅಭ್ಯುದಯದಲ್ಲಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರು ವಿಶೇಷ ಆಸಕ್ತಿಯನ್ನು ವಹಿಸಿದ್ದರು. ತಮ್ಮ ಮಾರ್ಗದರ್ಶನವಿಲ್ಲದೇ ಸ್ವತಂತ್ರರಾಗಿ ಇನ್ನು ಕಿರಿಯಯತಿಗಳು ಮುಂದುವರಿಯುವಷ್ಟು ಶಕ್ತಿ ಪಡೆದಿದ್ದಾರೆಂದು ಮನದಟ್ಟಾದ ಬಳಿಕ, ಹಿರಿಯ ಗುರುಗಳು ಮತ್ತೆ ತಮ್ಮ ಪೂರ್ವಸ್ಥಿತಿಗೆ ಹಿಂತಿರುಗಿದರು. ಅಂತರ್ಮುಖರಾಗದಿದ್ದಾಗ ಪೂಜಾನುಷ್ಠಾನಗಳಲ್ಲಿ ವಿನಾ ಉಳಿದ ಸಮಯಗಳಲ್ಲಿ

ಮೌನವಾಗಿರುತ್ತಿದ್ದರು. ಅವರ ಏಕಾಂತಪ್ರಿಯತೆ ಎಷ್ಟು ಹೆಚ್ಚಾಯಿತೆಂದರೆ ಬರಬರುತ್ತಾ ಅವರು ಹೊರಗೆ ಬರುವುದನ್ನೇ ನಿಲ್ಲಿಸಿಬಿಟ್ಟರು. ಸಾವಿರಾರು ಜನ ಭಕ್ತಾದಿಗಳು ಬಂದಾಗಲೂ ಹೊರಗೆ ಬರುತ್ತಿರಲಿಲ್ಲ. ಒಮ್ಮೊಮ್ಮೆ ಹೊರಗೆ ಬಂದರೂ ಕೇವಲ ಕೆಲವು ನಿಮಿಷಗಳು ಮಾತ್ರ ಕಾಣಿಸಿಕೊಳ್ಳುತ್ತಿದ್ದರು. ಆಗ ತೇಜೋಮಯವಾದ ಅವರ ಮುಖಾರವಿಂದ ದರ್ಶನ ಮಾತ್ರ ಲಭ್ಯವಾಗುತ್ತಿತ್ತು. ಅವರ ದಿವ್ಯವಾಣಿಯನ್ನು ಆಲೈಸುವ ಸೌಭಾಗ್ಯ ದೊರಕುತ್ತಿರಲಿಲ್ಲ. ಆದರೆ ಅವರ ದರ್ಶನವೇ ಸಾಕಾಗುತ್ತಿತ್ತು, ಭಕ್ತಿಯನ್ನು ಭಕ್ತರ ಹೃದಯದಲ್ಲಿ ಪುನರುತ್ಥಾನಗೊಳಿಸಲು.

ಕಿರಿಯ ಗುರುಗಳು ಮಠದ ಕಾರ್ಯಭಾರವನ್ನು ವಹಿಸಿಕೊಂಡುದರಿಂದ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ನಿಶ್ಚಿಂತೆಯಾಗಿ ಆತ್ಮ ಸಾಧನೆಯಲ್ಲಿ ನಿರತರಾದರು. ಮೊದಲೇ ವೈರಾಗ್ಯಕ್ಕೆ ಹೆಸರಾಗಿದ್ದ ಗುರುಗಳು ಎಲ್ಲಾ ವೈಭವ ಆಡಂಬರಗಳನ್ನು ತ್ಯಜಿಸಿದ್ದರು. ಅತ್ಯಂತ ಸಾಧಾರಣವಾದ ವಸ್ತ್ರವನ್ನು ಮಾತ್ರ ಧರಿಸುತ್ತಿದ್ದರು. ನಿರಾಡಂಬರ ಮೂರ್ತಿಯಾದ ಅವರು ಕಠಿಣ ವ್ರತ ನಿಯಮಗಳಿಂದ ಹೆಚ್ಚೆಚ್ಚು ತಪೋನುಷ್ಠಾನ ನಿರತರಾದರು. ತಮ್ಮ ವೈಯಕ್ತಿಕ ಅಗತ್ಯಗಳನ್ನು ಅತ್ಯಲ್ಪ ಪ್ರಮಾಣಕ್ಕೆ ಇಳಿಸಿಕೊಂಡು ತಮ್ಮೆಲ್ಲಾ ಶಕ್ತಿಗಳನ್ನೂ ಸಾಧನೆಯಲ್ಲಿ ತೊಡಗಿಸಿಕೊಂಡರು.

ಗುರುಗಳು ಕೆಲವೊಮ್ಮೆ ಬಹಿರ್ಮುಖರಾಗುತ್ತಿದ್ದರು. ಅಂತಹ ಕೆಲವು ಸಂದರ್ಭಗಳಲ್ಲಿ ಅವರನ್ನು ದರ್ಶನ ಮಾಡಿದ ಶಿಷ್ಯರು ಮತ್ತೊಮ್ಮೆ ಸಂಚಾರವನ್ನು ಕೈಗೊಳ್ಳಬೇಕೆಂದು ಪ್ರಾರ್ಥಿಸಿದರು. ಶೃಂಗೇರಿಯನ್ನು ಬಿಟ್ಟು ಹೊರಗೆ ಸಂಚರಿಸಲು ಗುರುವರ್ಯರು ಮೊದಮೊದಲು ಒಪ್ಪಲಿಲ್ಲ. ಸಂಚಾರವೆಂದರೆ ತಮ್ಮ ತಪೋನುಷ್ಠಾನಕ್ಕೆ ಅಡಚಣೆಯೆಂದು, ಆದರೆ ಶಿಷ್ಯರು ಬಿಡಲಿಲ್ಲ, ಬಹುವಿಧವಾಗಿ ಬೇಡಿಕೊಂಡರು, ಬಲವಂತ ಮಾಡಿದರು, ಕಡೆಗೆ ಒಪ್ಪಿಗೆಕೊಟ್ಟ ಗುರುವರ್ಯರು ತಮ್ಮ ಸಂಚಾರವು ಮಿತವಾಗಿರಬೇಕೆಂದೂ, ಮಠದ ಬಿರುದು ಬಾವಲಿ, ವಿಶೇಷ ಲಾಂಛನಗಳು, ರಾಜೋಚಿತ ಉಪಕರಣಗಳು, ಮುಂತಾದ ಯಾವುದೂ ಇರಕೂಡದೆಂದೂ ತಿಳಿಸಿದರು. ಮಿತಪರಿವಾರದೊಡನೆ ಕೇವಲ ಕೆಲವು ಸ್ಥಳಗಳಿಗೆ ಮಾತ್ರ ಹೊರಡುವುದಾಗಿ ತಿಳಿಸಿದರು. ಪ್ರಾರ್ಥನೆಯನ್ನು ಸಲ್ಲಿಸಿದ್ದ ಶಿಷ್ಯರು ಇದನ್ನೇ ಪ್ರಸಾದವೆಂದು ಒಪ್ಪಿದರು.

೧೯೩೮ರಲ್ಲಿ ಸಂಚಾರವಾರಂಭಿಸಿ ಬೆಂಗಳೂರಿಗೆ ದಯಮಾಡಿಸಿದ ಗುರುಗಳು ಹಲವು ದಿನಗಳ ಕಾಲ ಅಲ್ಲೇ ಇದ್ದು ಆಧ್ಯಾತ್ಮಿಕ ಪ್ರಭೆಯನ್ನು ಬೀರಿದರು. ಶ್ರೀ ಶಾರದಾಂಬಾ ದೇವಾಲಯದಲ್ಲಿ ದೇವಿಯನ್ನು ಪ್ರತಿಷ್ಠಾಪನೆ ಮಾಡಿದರು. ಬೆಂಗಳೂರಿನಲ್ಲಿ ಪ್ರವಾಹದಂತೆ ಬರುತ್ತಿದ್ದ ಜನಸಂದಣಿ, ಗಡಿಬಿಡಿ ಗೊಂದಲಗಳಲ್ಲಿ ಗುರುವರ್ಯರಿಗೆ ಅಗತ್ಯವಾಗಿದ್ದ ಏಕಾಂತವಾಸ ದೊರಕಲಿಲ್ಲ. ಅಲ್ಲಿಂದ ಮುಂದೆ ಹೊರಟು ಮೈಸೂರಿಗೆ

ದಯಮಾಡಿಸಿ ಮಹಾರಾಜರಿಗೆ ದರ್ಶನವಿತ್ತು ಮುಂದೆ ಘಟ್ಟವಿಳಿದು ಕೊಯಮತ್ತೂರಿನ ಮೂಲಕ ಕಾಲಟೀ ಕ್ಷೇತ್ರಕ್ಕೆ ಆಗಮಿಸಿದರು. ಮಾರ್ಗ ಮಧ್ಯದಲ್ಲಿ ಎಲ್ಲಿಯೂ ಹೆಚ್ಚು ಕಾಲ ನಿಲ್ಲಲಿಲ್ಲ.

ಕಾಲಟಿಯಲ್ಲಿ ಸುಮಾರು ಹತ್ತು ತಿಂಗಳ ಕಾಲ ಗುರುವರ್ಯರು ನೆಲಸಿದ್ದರು. ಇಲ್ಲೇ ಗುರುಗಳು ಶಂಕರಾಚಾರ್ಯರ "ವಿವೇಕ ಚೂಡಾಮಣಿ"ಗೆ ಭಾಷ್ಯ ಬರೆದರು. ಇಲ್ಲಿಗೂ ಸಹ ಭಕ್ತರ ಪ್ರವಾಹ ನುಗ್ಗಿತು. ದಕ್ಷಿಣ ದೇಶದ ವಿವಿಧ ಸ್ಥಳಗಳಿಂದ ಗುರುವರ್ಯರ ದರ್ಶನ ಪಡೆಯಲು, ಉಪದೇಶ ಪಡೆಯಲು ಜನ ತಂಡೋಪತಂಡವಾಗಿ ಬರಲಾರಂಭಿಸಿದರು. ಮೊದಲಿನಿಂದಲೂ ಮೌನ ಮತ್ತು ಏಕಾಂತ ಪ್ರಿಯರಾಗಿದ್ದ ಗುರುಗಳಿಗೆ ಈ ಸಂಚಾರಕಾಲದಲ್ಲಿ ಅವೆರಡೂ ಲಭ್ಯವಾಗಲಿಲ್ಲ. ಹೋದೆಡೆಗಳಲ್ಲಿ ಜನ ಇರುವೆಗಳಂತೆ ಮುತ್ತುತ್ತಿದ್ದರು. ಈ ಮಹಾಪುರುಷರ ಹೆಸರನ್ನು ಕೇಳಿದವರು ದೂರದೂರದಿಂದ ಬಂದು ದರ್ಶನಕ್ಕಾಗಿ ಹಾತೊರೆಯುತ್ತಿದ್ದರು. ಹಲವು ನಿಮಿಷಗಳ ಕಾಲ ದರ್ಶನಕ್ಕಾಗಿ ಹಾದಿಯಲ್ಲಿ ಗಂಟೆಗಟ್ಟಲೆ ಕಾಯುತ್ತಿದ್ದರು. ಗುರುಗಳು ಸಂಚಾರ ಮುಗಿಸಿಕೊಂಡು ೧೯೪೦ರಲ್ಲಿ ಶೃಂಗೇರಿಗೆ ಹಿಂದಿರುಗಿದರು.

ಯಾತ್ರೆಯಿಂದ ಹಿಂತಿರುಗಿದ ಮೇಲೆ ಗುರುವರ್ಯರು ಸಂಪೂರ್ಣವಾಗಿ ಲೌಕಿಕ ವ್ಯವಹಾರವನ್ನು ತ್ಯಜಿಸಿ ತಾವು ಸದಾ ಆತ್ಮಧ್ಯಾನದಲ್ಲಿ ನಿರತರಾಗಿರುತ್ತಿದ್ದರು. ಸುಮಾರು ದಶಕಗಳಕಾಲ ಅದರಲ್ಲೇ ತಲ್ಲೀನರಾಗಿದ್ದರು. ಮಠದಲ್ಲಿದ್ದವರಿಗೇ ಗುರುಗಳ ವಾಣಿಯನ್ನು ಕೇಳುವುದಿರಲಿ, ಅವರ ದರ್ಶನವೇ ಅಸಾಧ್ಯವಾಗಿತ್ತು. ಇನ್ನು ಉಳಿದವರ ಪಾಡೇನು? ಅವರ ದರ್ಶನವೇ ಒಂದು ಸೌಭಾಗ್ಯ ಎನ್ನುವಂತಾಗಿತ್ತು.

ಶ್ರೀ ಗುರುವರ್ಯರ ಅರವತ್ತನೆಯ ಸಂವತ್ಸರ ಸಮೀಪಿಸುತ್ತಿದ್ದಾಗ ಅನೇಕ ಮಂದಿ ಶಿಷ್ಯರು ಅವರ ಷಷ್ಠಿಪೂರ್ತಿ ಉತ್ಸವವನ್ನು ನಡೆಸುವ ಉತ್ಸಾಹ ಹೊಂದಿದ್ದರು. ಗುರುಗಳಲ್ಲಿಯೂ ತಮ್ಮ ಸಂಕಲ್ಪವನ್ನು ನಿವೇದಿಸಿಕೊಂಡರು. ಆದರೆ ಗುರುಗಳು ಈ ವೈಭವ, ಉತ್ಸವಾದಿಗಳಿಗೆ ಬಹಳ ಹಿಂದೆಯೇ ದೂರವಾಗಿಬಿಟ್ಟಿದ್ದರು. ಶಿಷ್ಯಪರಿಗ್ರಹಣಮಾಡಿ ತಮ್ಮ ಉತ್ತರಾಧಿಕಾರಿಯನ್ನು ನೇಮಿಸಿದೊಡನೆಯೇ ರಾಜಲಾಂಛನಗಳಾದ ಕಿರೀಟ ಧಾರಣೆ, ಸಿಂಹಾಸನಾರೋಹಣ, ಪಲ್ಲಕ್ಕಿ ಉತ್ಸವ, ನವರಾತ್ರಿ ಕಾಲದಲ್ಲಿ ನಡೆಯುತ್ತಿದ್ದ ದರ್ಬಾರು ಮುಂತಾದುದೆಲ್ಲವನ್ನೂ ಕಿರಿಯ ಸ್ವಾಮಿಗಳಿಗೆ ವಹಿಸಿ ಬಿಟ್ಟಿದ್ದರು. ಪೂರ್ಣವಾಗಿ ವೈರಾಗ್ಯವನ್ನು ಅಂಗೀಕರಿಸಿ ಅತ್ಯಂತ ಸರಳ ಜೀವನವನ್ನು ನಡೆಸುತ್ತಿದ್ದರು.

ಶಿಷ್ಯರ ಈ ಬೇಡಿಕೆಯನ್ನು ಗುರುಗಳು ಒಪ್ಪಲಿಲ್ಲ. ಆದರೆ ಶಿಷ್ಯರು ಬಿಡಲಿಲ್ಲ. ಮತ್ತೆ ಮತ್ತೆ ಬಿನ್ನವಿಸಿಕೊಂಡು ಅದನ್ನು ಕೇವಲ ಸಾರ್ವಜನಿಕ ಲೌಕಿಕ ಸಮಾರಂಭವನ್ನಾಗಿ ನಡೆಸದೆ ಲೋಕ ಕಲ್ಯಾಣಾರ್ಥವಾಗಿ ಅತಿರುದ್ರ ಮಹಾಯಾಗ, ಸಹಸ್ರ ಚಂಡಿಹೋಮ,

ಪಾರಾಯಣಾದಿಗಳು ಮತ್ತು ಪೂಜಾದಿಗಳನ್ನು ನೆರವೇರಿಸುವುದರ ಮೂಲಕ ಆಚರಣೆ ಮಾಡುವುದಾಗಿ ವಿಜ್ಞಾಪನೆ ಮಾಡಿದರು. ಕೊನೆಗೆ ಗುರುಗಳು ಒಪ್ಪಿಗೆ ಕೊಟ್ಟರೂ ಸಹ ಹೋಮಹವನಾದಿಗಳು ತಮ್ಮ ಷಷ್ಠಿಪೂರ್ತಿಯ ಅಂಗವಾಗಿ ಇರಕೂಡದೆಂದು ಸ್ಪಷ್ಟಪಡಿಸಿದರು.

ಶೃಂಗೇರಿಯಲ್ಲಿ ಮತ್ತೊಮ್ಮೆ ಉತ್ಸಾಹ ಚಟುವಟಿಕೆಗಳು ಆರಂಭವಾದವು. ಶ್ರೀಮದಭಿನವ ವಿದ್ಯಾತೀರ್ಥರ ಮೇಲ್ವಿಚಾರಣೆಯಲ್ಲಿ ಎಲ್ಲಾ ಏರ್ಪಾಡುಗಳು ನಡೆಯುತ್ತಿದ್ದವು. ಲೋಕ ಕಲ್ಯಾಣಾರ್ಥವಾಗಿ ನಡೆಯುತ್ತಿದ್ದ ಈ ಕಾರ್ಯದ ಎಲ್ಲಾ ಸಿದ್ಧತೆಗಳನ್ನೂ ಕಾರ್ಯಭಾರಿಗಳಿಂದ ವಿಚಾರಿಸಿ ಸೂಕ್ತ ಸಲಹೆ ಕೊಡುತ್ತಿದ್ದರು. ತಮ್ಮ ಷಷ್ಠಿಪೂರ್ತಿಯ ಕಾಲಕ್ಕೆ ಅದನ್ನಾಚರಿಸುವ ಸಲುವಾಗಿಯೇ ಉತ್ಸವಾದಿಗಳು ನಡೆಸಕೂಡದೆಂದು ಗುರುಗಳು ನುಡಿದಿದ್ದರಿಂದ ಕೆಲವು ದಿನಗಳ ಬಳಿಕವೇ ಈ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ನಿರ್ಧರಿಸಿದರು. ಆದರೆ ಗುರುಗಳು ಯಾವ ಸಮಾರಂಭಕ್ಕೂ ಬಾರದೆ ಅಂತರ್ಮುಖಿಗಳಾಗಿಬಿಟ್ಟಿದ್ದರು. ಎಲ್ಲಾ ಕರ್ಮಗಳು ಶಾಸ್ತ್ರೋಕ್ತವಾಗಿ ನಡೆಸಲ್ಪಟ್ಟಿತು. ಶ್ರೀ ಅತಿರುದ್ರಸ್ವಾಹಾಕಾರ ಮಹಾಯಾಗವೂ ಮತ್ತು ಶ್ರೀ ಸಹಸ್ರಚಂಡಿಹೋಮವೂ ನಡೆದುವು. ಗುರುಗಳು ನುಡಿದಂತೆ ಪೂರ್ಣಾಹುತಿಯ ಕಾಲಕ್ಕೆ ಸರಿಯಾಗಿ ವರುಣದೇವನು ಪುಷ್ಪವೃಷ್ಟಿಯನ್ನು ಕರೆದನು.

ಶ್ರೀ ಗುರುವರ್ಯರನ್ನ ಬಹಳ ವರ್ಷಗಳ ನಂತರ ದರ್ಶನ ಮಾಡುವ ಆಸೆಯಿಂದ ದೂರ ದೂರ ಸ್ಥಳಗಳಿಂದ ಬಂದವರು ಗುರುಗಳ ದರ್ಶನ ಸಿಗದೇ ಸ್ವಲ್ಪಮಟ್ಟಿಗೆ ನಿರಾಶರಾದರು. ಅವರನ್ನು ಪ್ರತ್ಯಕ್ಷವಾಗಿ ಕಾಣಲಾಗದಿದ್ದರೂ ತಮ್ಮ ಹೃದಯದಲ್ಲಿಯೇ ಅವರ ದಿವ್ಯಮೂರ್ತಿಯನ್ನು ಚಿತ್ರಿಸಿಕೊಂಡು ಭಕ್ತಿಯಿಂದ ಮಾನಸ ಪೂಜೆ ನಡೆಸಿದರು. ಚಿಕ್ಕ ಗುರುಗಳನ್ನೇ ದರ್ಶಿಸಿ ತೃಪ್ತಿ ಹೊಂದಿದರು. ಯಾರ ಹೆಸರಿನಲ್ಲಿ ಈ ಉತ್ಸವಗಳೆಲ್ಲವೂ ಜರುಗಿದವೋ ಆ ಮಹಾ ಪುರುಷರು ಎಲ್ಲಾ ವೈಭವಗಳಿಂದಲೂ ದೂರವಾಗಿ ಅಂತರ್ಮುಖಿಗಳಾಗಿ ತಪೋನಿರತರಾಗಿದ್ದರು. ಭಾರತದಾದ್ಯಂತ ಅನೇಕ ಸನ್ಯಾಸಿಗಳು, ಸಾಧುಗಳು, ಮಠಾಧಿಪತಿಗಳು ಈ ಉತ್ಸವಕ್ಕೆ ಆಗಮಿಸಿದ್ದರು. ಅವರಲ್ಲಿ ಸಜ್ಜನಘಡದ ಶ್ರೀ ಶ್ರೀಧರಸ್ವಾಮಿಗಳು ಪ್ರಮುಖರು.

ಎಲ್ಲರಿಗೂ ಸಮರ್ಪಕವಾಗಿ ಪ್ರಸಾದ ವಿನಿಯೋಗಕ್ಕೆ, ಊಟ ವಸತಿಗಳಿಗೆ, ವ್ಯವಸ್ಥೆಯಾಗಿದ್ದು, ಬಂದವರೆಲ್ಲರೂ ಶ್ರೀ ಶಾರದಾದೇವಿ, ಶ್ರೀ ನೃಸಿಂಹಭಾರತೀಸ್ವಾಮಿಗಳವರ ಅಧಿಷ್ಠಾನ ಮಂದಿರ ಮತ್ತು ಶ್ರೀಮದಭಿನವ ವಿದ್ಯಾತೀರ್ಥಸ್ವಾಮಿಗಳವರ ದರ್ಶನ ಪಡೆದು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರನ್ನು, ತಮ್ಮ ತಮ್ಮ ಹೃದಯಗಳಲ್ಲೇ ನೆನೆದು ಭಗವಂತನ ಅನುಗ್ರಹ ಹೊತ್ತು ಆನಂದದಿಂದ ಹಿಂತಿರುಗಿದರು.

ಉತ್ಸವಾದಿಗಳು ಕಳೆದ ನಂತರ ಸ್ವಲ್ಪ ದಿನಗಳ ಬಳಿಕ ಗುರುವರ್ಯರು ಮತ್ತೆ ಬಹಿರ್ಮುಖರಾದರು, ನಿತ್ಯ ಕಾರ್ಯಗಳಲ್ಲಿ, ಪೂಜಾದಿ ಅನುಷ್ಠಾನಗಳಲ್ಲಿ ಮತ್ತೆ ನಿರತರಾದರು. ಸಾಧಾರಣವಾಗಿ ಗುರುಗಳು ಬಹಿರ್ಮುಖರಾದ ಸುದ್ದಿ ಬಲು ಬೇಗ ವ್ಯಾಪಿಸಿಬಿಡುತ್ತಿತ್ತು. ಜನ ಒಡನೆಯೇ ದರ್ಶನಕ್ಕಾಗಿ ಧಾವಿಸುತ್ತಿದ್ದರು. ಅವರಿಂದ ಯಾವ ಮಾತುಕತೆಗಳನ್ನೂ, ಉಪದೇಶಗಳನ್ನೂ, ಬೋಧನೆಗಳನ್ನೂ ಕೇಳದೇ ಇದ್ದರೂ ಅವರ ತೇಜೋಮಯವಾದ ವದನಾರವಿಂದ ದರ್ಶನವೇ ಸಾಕಾಗಿತ್ತು ಭಕ್ತರಿಗೆ. ಆ ಸಮಯದಲ್ಲಿ ದರ್ಶನ ಪಡೆದವರಲ್ಲಿ ವಿದ್ವತ್ತಿನ ಗಣಿಯೂ, ಎಲ್ಲರ ಮಾನ್ಯತೆಗೆ ಪಾತ್ರರಾದವರೂ ಆದ ಡಾ|| ಸರ್ವಪಲ್ಲಿ ರಾಧಾಕೃಷ್ಣನ್ ರವರು ಒಬ್ಬರು. ಮತ್ತೊಬ್ಬರು ಭಾರತದ ರಾಷ್ಟ್ರಾಧ್ಯಕ್ಷರಾಗಿದ್ದ ಡಾ|| ರಾಜೇಂದ್ರಪ್ರಸಾದರವರು. ಭಾರತೀಯ ಪರಂಪರೆಯಲ್ಲಿ ಧರ್ಮದಲ್ಲಿ ನಂಬಿಕೆಗಳನ್ನು ಹೊಂದಿದ್ದ ಈ ಮಹನೀಯರುಗಳು ಶೃಂಗೇರಿಗೆ ಆಗಮಿಸಿ ಶ್ರೀ ಶಾರದಾದೇವಿಯ ಸನ್ನಿಧಿಯಲ್ಲಿ ತಪಶ್ಚಕ್ರವರ್ತಿಯೂ, ವಿಭೂತಿ ಪುರುಷರೂ, ಪರಮ ವಿರಾಗಿಯೂ ಆಗಿದ್ದ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ದರ್ಶನ ಪಡೆದರು. ಭಾರತದ ರಾಷ್ಟ್ರಾಧ್ಯಕ್ಷ, ಉಪರಾಷ್ಟ್ರಾಧ್ಯಕ್ಷರಿಬ್ಬರೂ ಶ್ರೀ ಗುರುವರ್ಯರ ಅಗಾಧ ಪಾಂಡಿತ್ಯ, ಅಪರಿಮಿತವಾದ ಜ್ಞಾನ ಇವುಗಳನ್ನು ಕಂಡು ಸಂತೋಷಚಿತ್ತರಾದರು.

ಶಾರದಾ ದೇವಿಯ ಸನ್ನಿಧಿಯಲ್ಲಿ ಗುರುಗಳೊಡನೆ ಮಾತುಕತೆ ನಡೆಸಿದ ರಾಷ್ಟ್ರಪತಿಗಳು ನಂತರ ವೇದಪಾಠ ಶಾಲೆಗೂ ಭೇಟಿ ಇತ್ತು ಅಲ್ಲೂ ಸಹ ಸಮಾಲೋಚನೆ ನಡೆಸಿದರು. ಈ ಸಂದರ್ಭದಲ್ಲಿ ಮಠದ ಜಹಗೀರಿಯಾದ ಭೂಮಿಕಾಣಿಯನ್ನು ಸರಕಾರ ತನ್ನ ಶಾಸನದ ಪ್ರಕಾರ ವಶಮಾಡಿಕೊಳ್ಳುವ ವಿಚಾರವಾಗಿ ಗುರುಗಳು ರಾಷ್ಟ್ರಪತಿಗಳಿಗೆ ಒಂದು ಮಾತು ಹೇಳಿದರೆ ಮಠಕ್ಕೆ ಈ ಶಾಸನದಿಂದ ವಿನಾಯತಿ ದೊರೆಯಬಹುದೆಂದು ಬಗೆದು ಮಠದ ಅಧಿಕಾರಿಗಳು ಗುರುಗಳನ್ನು ಪ್ರಾರ್ಥಿಸಿಕೊಂಡಿದ್ದರು. ಆದರೆ ಎಂದೂ ವ್ಯವಹಾರದಲ್ಲಿ ಆಸಕ್ತಿ ತೋರದ ಗುರುಗಳು "ಆಚಾರ್ಯರು ಈ ಪೀಠವನ್ನು ಸ್ಥಾಪಿಸುವಾಗ ಯಾವ ಜಹಗೀರಿ ಇದ್ದಿತು? ಎಷ್ಟು ಭೂಮಿ ಕಾಣಿ ಇದ್ದಿತು. ಇವುಗಳನ್ನು ನೋಡಿಕೊಂಡು ಆಚಾರ್ಯರು ಮಠ ಸ್ಥಾಪನೆ ಮಾಡಿದರೆ? ಮಠಕ್ಕೆ ಆಸ್ತಿಯೆಂದರೆ ಧರ್ಮ, ದೈವ, ಆಸ್ತಿಕ ಶಿಷ್ಯರು ಅಷ್ಟೇ" ಎಂದು ಹೇಳಿ ಕಳುಹಿಸಿದರು.

ರಾಷ್ಟ್ರಾಧ್ಯಕ್ಷರು ಬಂದು ತೆರಳಿದ ನಂತರ ಶ್ರೀ ಗುರುವರ್ಯರು ಮತ್ತೆ ಅಂತರ್ಮುಖರಾಗಲಿಲ್ಲ. ಎಂದಿನಂತೆ ತಮ್ಮ ನಿತ್ಯಾನುಷ್ಠಾನ, ಪೂಜಾದಿಗಳಲ್ಲಿ ನಿರತರಾದರು. ಆಷಾಢಮಾಸದ ವ್ಯಾಸಪೂರ್ಣಿಮೆಯಲ್ಲಿ ತಾವೇ ಚಾತುರ್ಮಾಸ ವ್ರತಸಂಕಲ್ಪವನ್ನು ಕೈಗೊಂಡು ಭಕ್ತವೃಂದಕ್ಕೆ ಆನಂದವನ್ನು ಉಂಟುಮಾಡಿದ್ದರು. ಇದೇ ರೀತಿ ನವರಾತ್ರಿಯ ಕಾಲದಲ್ಲಿಯೂ ಗುರುವರ್ಯರು ಬಹಿರ್ಮುಖರಾಗಿದ್ದರೆ ಭಕ್ತರಿಗೆ ದರ್ಶನಲಾಭ ದೊರೆಕಬಹುದೆಂದೂ, ಆ ವರ್ಷದ ನವರಾತ್ರಿಯಲ್ಲಿ ಇಬ್ಬರು ಗುರುಗಳನ್ನೂ ಒಟ್ಟಿಗೆ ಕಾಣಬಹುದೆಂದೂ ಅನೇಕರು

ಭಾವಿಸಿದ್ದರು. ಆ ವರ್ಷದ ನವರಾತ್ರಿ ಉತ್ಸವಕ್ಕೆ ವಿಶೇಷವಾದ ಏರ್ಪಾಟುಗಳು ನಡೆದವು. ಪ್ರತಿ ನವರಾತ್ರಿಯಲ್ಲಿಯೂ ಸಾಧಾರಣವಾಗಿ ಅಂತರ್ಮುಖಿಗಳಾಗಿರುತ್ತಿದ್ದ ಗುರುವರ್ಯರು ಆ ವರ್ಷ ಬಹಿರ್ಮುಖರಾಗಿದ್ದುದರಿಂದಲೂ, ಶೃಂಗೇರಿಯಲ್ಲಿ ನಡೆಯುವ ನವರಾತ್ರಿ ಉತ್ಸವಕ್ಕೆ ಜನ ಅಧಿಕ ಸಂಖ್ಯೆಯಲ್ಲಿ ಬರುವ ನಿರೀಕ್ಷೆ ಇತ್ತು.

ಪ್ರತಿನಿತ್ಯವೂ ಶ್ರೀ ಗುರುವರ್ಯರು ಪೂಜಾನುಷ್ಠಾನ ಕಾರ್ಯಕ್ರಮಗಳಲ್ಲಿ ನಿರತರಾಗಿರುತ್ತಿದ್ದರು. ಭಕ್ತಾದಿಗಳಿಗೆ ದರ್ಶನ ಕೊಡುವುದು, ಯೋಗಕ್ಷೇಮಗಳನ್ನು ವಿಚಾರಿಸುವುದು, ಶ್ರೀ ಶಾರದಾದೇವಿಯ ಮಂದಿರಕ್ಕೆ ದಯಮಾಡಿಸಿ ದರ್ಶನ ಪಡೆಯುವುದು, ತಮ್ಮ ಅನುಷ್ಠಾನಗಳನ್ನು ಕ್ರಮವಾಗಿ ನೆರವೇರಿಸುವುದು, ಮುಂತಾದ ಕಾರ್ಯಗಳನ್ನೆಲ್ಲಾ ಯಾವ ಲೋಪವೂ ಇಲ್ಲದಂತೆ ಗುರುವರ್ಯರು ನಡೆಸುತ್ತಿದ್ದರು. ಗುರುವರ್ಯರ ನಡವಳಿಕೆ, ಮಾತುಕತೆಗಳು ಅವರು ಶೀಘ್ರದಲ್ಲಿಯೇ ಅಂತರ್ಮುಖರಾಗಲಾರರೆಂಬ ನಂಬಿಕೆಯನ್ನು ಹುಟ್ಟಿಸಿತ್ತು. ಎಂದಿನಂತೆ ಶ್ರೀ ಗುರುದೇವರ ದರ್ಶನಕ್ಕೆ ಎಲ್ಲೆಡೆಗಳಿಂದಲೂ ಜನ ಬರುತ್ತಲೇ ಇದ್ದರು.

ಅಂದು ಚತುರ್ದಶಿ, ಇನ್ನೆರಡು ದಿವಸಗಳಲ್ಲಿ ನವರಾತ್ರಿ ಸಡಗರ ಆರಂಭವಾಗುವುದರಲ್ಲಿತ್ತು. ಗುರುವರ್ಯರು ಸಹ ಬಹಿರ್ಮುಖರಾಗಿದ್ದರು. ಈ ಬಾರಿಯ ನವರಾತ್ರಿಯ ಉತ್ಸವವನ್ನು ಅದ್ಧೂರಿಯಾಗಿ ಆಚರಿಸಲು ಸಕಲ ಸಿದ್ಧತೆಯೂ ನಡೆದಿತ್ತು. ಅಂದು ಸಂಜೆ ಗುರುವರ್ಯರು ಕಾಲಭೈರವ ದೇವಸ್ಥಾನಕ್ಕೆ ದಯಮಾಡಿಸಿ ಸ್ವಲ್ಪ ಹೊತ್ತು ಅಲ್ಲಿ ಇದ್ದು ನಂತರ ತಮ್ಮ ಗುರುಗಳಾದ ಶ್ರೀ ನೃಸಿಂಹಭಾರತೀ ಸ್ವಾಮಿಗಳವರ ಅಧಿಷ್ಠಾನ ಮಂದಿರದಲ್ಲಿ ಬಹಳ ಹೊತ್ತು ಧ್ಯಾನಮಗ್ನರಾಗಿ ಶತಪಥ ಹಾಕುತ್ತಿದ್ದರು. ಗುರುವರ್ಯರನ್ನು ಅತ್ಯಂತ ಭಕ್ತಿಪೂರ್ವಕವಾಗಿ ಸೇವಿಸುವ ಮಹಾಬಲಭಟ್ಟರು ರಾತ್ರಿ ಪಾಳಿಗೆ ನೇಮಿಸಲ್ಪಟ್ಟಿದ್ದರು. ಮರುದಿನ ಅಂದರೆ ಶ್ರೀ ಜಯಸಂವತ್ಸರದ ಭಾದ್ರಪದ ಬಹುಳ ಅಮಾವಾಸ್ಯೆಯಂದು (೨೬-೦೯-೧೯೫೪) ಬ್ರಾಹ್ಮೀಮುಹೂರ್ತದ ಮುನ್ನವೇ ಗುರುಗಳು ಸ್ನಾನಕ್ಕಾಗಿ ತುಂಗಾನದಿಯತ್ತ ಹೊರಟು ನಿಂತರು. ಅವರ ಸೇವಕರಾದ ಮಹಾಬಲಭಟ್ಟರು ನಮ್ರರಾಗಿ "ಸ್ನಾನಕ್ಕೆ ಬಿಸಿನೀರು ಸಿದ್ಧವಾಗಿದೆ. ಹೀಗೆ ದಯಮಾಡಿಸಬೇಕು," ಎಂದು ನಿವೇದಿಸಿದರು. ಆದರೆ ಗುರುವರ್ಯರು, "ಇವತ್ತು ಪವಿತ್ರವಾದ ದಿನ, ನದಿಯಲ್ಲಿಯೇ ಸ್ನಾನ ಮಾಡುವೆವು" ಎಂದು ನುಡಿದು ಅವರ ಉತ್ತರಕ್ಕೂ ಕಾಯದೆ ನೃಸಿಂಹವನದ ತಮ್ಮ ವಾಸಸ್ಥಳದಿಂದ ತುಂಗಾನದಿಯತ್ತ ಧಾವಿಸಿದರು. ಕೂಡಲೇ ಮಹಾಬಲಭಟ್ಟರು ಲಾಟಿನ್ ಹಿಡಿದು ಗುರುಗಳನ್ನು ಹಿಂಬಾಲಿಸಿದರು. ಗುರುಗಳು ಸಂಧ್ಯಾಮಂಟಪದಲ್ಲಿ ಬಂದು ನಿಂತರು. ಅಲ್ಲೇ ಪ್ರಾಣಾಯಾಮ ಮಾಡಿ ಶ್ವಾಸಬಂಧನ ಮಾಡಿದರು. ಮಹಾಬಲಭಟ್ಟರು ಎಂದಿನಂತೆ ನೀರಿಗೆ ಇಳಿದು ಬಟ್ಟೆ ಒಗೆಯಲು ಅಣಿಯಾಗುತ್ತಿದ್ದರು. ಸ್ವಲ್ಪಕಾಲ ಅಚಲರಾಗಿ ಜಲರಾಶಿಯ ಮಧ್ಯೆ ನಿಂತ ಗುರುವರ್ಯರು ಪಂಚಪ್ರಾಣಗಳನ್ನೂ

ನಿಶ್ಚಲ ಮಾಡಿ ಬ್ರಹ್ಮರಂಧ್ರದ ಮೂಲಕ ಹೊರ ಹೊರಡಿಸಿದರು. ಅವರ ದೇಹವು ತುಂಗೆಯಲ್ಲುರುಳಿತು. ಏನೋ ಶಬ್ದವಾದಂತೆ ಗ್ರಹಿಸಿದ ಮಹಾಬಲ ಭಟ್ಟರು ಒಮ್ಮೆ ತಿರುಗಿ ನೋಡಿದರು. ಗುರುಗಳ ದೇಹ ಪದ್ಮಾಸನ ಭಂಗಿಯಲ್ಲಿ ತೇಲಿಹೋಗುತ್ತಿದ್ದದ್ದನ್ನು ನೋಡಿ ಗಾಬರಿಯಾದ ಮಹಾಬಲ ಭಟ್ಟರು ಒಡನೆಯೇ ನೀರಿಗೆ ಧುಮುಕಿದರು. ಅತ್ಯಂತ ವೇಗದಿಂದ ಹರಿಯುತ್ತಿದ್ದ ತುಂಗೆಯಲ್ಲಿ ಬಹಳ ಪ್ರಯಾಸದಿಂದ ಈಜಿದ ಭಟ್ಟರು ಗುರುಗಳ ಶರೀರವನ್ನು ದಡಸೇರಿಸಲು ಒದ್ದಾಡುತ್ತಿದ್ದರು. ಅದೇ ಸಮಯದಲ್ಲಿ ಅತ್ತ ಕಡೆ ಸ್ನಾನಕ್ಕಾಗಿ ಬಂದಿದ್ದ ಕೇಶವಾಚಾರಿ ಮತ್ತು ಅಹೋಬಲ ಸೋಮಯಾಜಿ ಎಂಬುವವರು ಈ ದೃಶ್ಯವನ್ನು ಕಂಡು ತಾವು ಸಹ ನೀರಿಗೆ ಧುಮಿಕಿದರು. ತಮ್ಮೆಲ್ಲ ಶಕ್ತಿಯನ್ನು ಉಪಯೋಗಿಸಿ ಅತ್ಯಂತ ಸಾಹಸದಿಂದ ಶ್ರೀ ಗುರುವರ್ಯರ ದೇಹವನ್ನೂ, ಮಹಾಬಲಭಟ್ಟರನ್ನು ದಡಕ್ಕೆ ತಂದರು. ಒಡನೆಯೇ ವರ್ತಮಾನವನ್ನು ಸ್ನಾನಕ್ಕಾಗಿ ಹೊರಡುತ್ತಿದ್ದ ಶ್ರೀ ವಿದ್ಯಾತೀರ್ಥ ಸ್ವಾಮಿಗಳವರಿಗೆ ತಿಳಿಸಿದರು. ಒಡನೆಯೇ ವಿದ್ಯಾತೀರ್ಥ ಸ್ವಾಮಿಗಳು ಓಡೋಡಿ ಬಂದರು. ರಾಷ್ಟ್ರಾದ್ಯಂತವೂ ಶ್ರೀ ಗುರುವರ್ಯರು ನಿರ್ವಾಣ ಹೊಂದಿದ ವರ್ತಮಾನವು ಬಲುಬೇಗ ವ್ಯಾಪಿಸಿತು.

ಶ್ರೀ ಗುರುವರ್ಯರ ಶರೀರವನ್ನು ದಡಕ್ಕೆ ತಂದೊಡನೆಯೇ ಪಂಡಿತರೂ, ವೈದ್ಯರುಗಳೂ ಓಡೋಡಿ ಬಂದರು. ಗುರುಗಳಲ್ಲಿ ಸ್ವಲ್ಪವಾದರೂ ಶ್ವಾಸೋಚ್ಛ್ವಾಸವಿದೆಯೇನೋ ಎಂದು ಪರೀಕ್ಷಿಸಿದರು. ಆದರೆ ಅವರ ಪ್ರಯತ್ನಗಳಾವುವೂ ಫಲಿಸಲಿಲ್ಲ. ಜಲ ಪ್ರವಾಹದಲ್ಲಿ ಸಿಲುಕಿದ್ದ ದೇಹವು ಪದ್ಮಾಸನಸ್ಥವಾಗಿಯೇ ಇದ್ದು ಎರಡು ಹಸ್ತಗಳು ಧ್ಯಾನಮುದ್ರೆಯನ್ನು ತೋರುತ್ತಿದ್ದವು. ಅಂತಹ ಪ್ರವಾಹದಲ್ಲಿ ಮುಳುಗಿದರೂ ಗುರುಗಳ ದೇಹದಲ್ಲಿ ಒಂದೇ ಒಂದು ಹನಿ ನೀರು ಸಹ ಪ್ರವೇಶಿಸಿರಲಿಲ್ಲ. ಇದನ್ನು ನೋಡಿದ ವೈದ್ಯರು ವಿಸ್ಮಿತರಾದರು. ಶ್ರೀ ವಿದ್ಯಾತೀರ್ಥಸ್ವಾಮಿಗಳು ಬಂದು ಬಹಳ ದುಃಖದಿಂದ ತಮ್ಮ ಗುರುಗಳನ್ನು ದರ್ಶಿಸಿದರು. ಆದರೆ ಮುಂದಿನ ಕಾರ್ಯಗಳತ್ತ ಗಮನ ಕೊಡಬೇಕಾಗಿದ್ದರಿಂದ ವಿದ್ಯಾತೀರ್ಥ ಸ್ವಾಮಿಗಳು ಬಹಳ ಬೇಗ ಚೇತರಿಸಿಕೊಂಡು ಕಾರ್ಯ ಪ್ರವೃತ್ತರಾದರು. ಮಠದ ಸಂಪ್ರದಾಯದಂತೆ ಶ್ರೀ ಶ್ರೀಗಳವರ ಕಳೇಬರಕ್ಕೆ ನಡೆಯಬೇಕಾದ ಸಂಸ್ಕಾರಗಳೆಲ್ಲವೂ ನಡೆಸಲ್ಪಟ್ಟವು. ಯತಿಗಳು ಮುಕ್ತಿ ಹೊಂದಿದಾಗ ನೆತ್ತಿಯಲ್ಲಿರುವ ಬ್ರಹ್ಮರಂಧ್ರವನ್ನು ತೆರೆಯುವುದಕ್ಕಾಗಿ ತಲೆಯಮೇಲೆ ತೆಂಗಿನಕಾಯಿಗಳನ್ನೊಡೆಯುವುದು ವಾಡಿಕೆ. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ಶಿರಸ್ಸಿನಲ್ಲಿ ಒಂದು ನಾರಿಕೇಳ ಫಲದ ಸ್ಪರ್ಶಕ್ಕೆ ಬ್ರಹ್ಮರಂಧ್ರವು ತೆರೆಯಲ್ಪಟ್ಟಿತು. ಅವರಿಗೆ ಅತ್ಯಂತ ಪೂಜ್ಯರೂ, ಪರಮ ಪ್ರಿಯರೂ, ಆಗಿದ್ದ ಅವರ ಗುರುಗಳು ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಸಮಾಧಿಯ ಪಕ್ಕದಲ್ಲೇ ಶ್ರೀ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳವರ ಕಳೇಬರಹವು ಸಹ ಸಮಾಧಿ ಮಾಡಲ್ಪಟ್ಟಿತು.

ಎಡೆಬಿಡದೆ ಸುರಿಯುತ್ತಿದ್ದ ಮಳೆಯಿಂದ ಸಮಾಧಿಯ ಜಾಗವೆಲ್ಲ ಕೆಸರಾಗಿತ್ತು. ಅಂತಹ ಮಳೆಯಲ್ಲಿಯೂ ಸಹ ಭಕ್ತರು ಗುರುಗಳ ಅಂತ್ಯಕ್ರಿಯೆಯಲ್ಲಿ ಪಾಲ್ಗೊಂಡರು. ಕ್ರಮೇಣ ತಂಡೋಪತಂಡವಾಗಿ ಆಗಮಿಸಿದ ಭಕ್ತವೃಂದ ಗುರುಗಳ ಸಮಾಧಿಯನ್ನು ದರ್ಶಿಸಿ ಕಂಬನಿಗರೆದರು. ದೇಶದಾದ್ಯಂತ ಶೋಕಸಭೆಗಳಾದುವು. ಸಂತಾಪಸಭೆಗಳಾದುವು. ಬ್ರಾಹ್ಮಣರೂ, ಬ್ರಾಹ್ಮಣೇತರರೂ, ಹಿಂದುಗಳೂ, ಮುಸಲ್ಮಾನರೂ, ಕ್ರಿಶ್ಚಿಯನ್ನರೂ ಎಲ್ಲರೂ ತಮ್ಮ ತಮ್ಮ ಅನುತಾಪವನ್ನೂ, ದುಃಖವನ್ನೂ ಸೂಚಿಸಿದರು. ಶ್ರದ್ಧಾಂಜಲಿ ಅರ್ಪಿಸಿದರು. ಅನೇಕ ಕಡೆಗಳಲ್ಲಿ ಶ್ರೀ ಗುರುವರ್ಯರ ಆರಾಧನೆಗಳು ನಡೆದವು. ರಾಷ್ಟ್ರಾಧ್ಯಕ್ಷರೂ, ಉಪರಾಷ್ಟ್ರಾಧ್ಯಕ್ಷರೂ, ರಾಜಮಹಾರಾಜರುಗಳೂ ಎಲ್ಲರೂ ತಮ್ಮ ಭಕ್ತಿ ಗೌರವಗಳನ್ನು ಸಮರ್ಪಿಸಿದರು. ೪೨ ವರ್ಷಗಳ ಕಾಲ ಜ್ಞಾನ ಜ್ಯೋತಿಯಂತೆ ಬೆಳಗಿದ ಗುರುವರ್ಯರು ಪರಬ್ರಹ್ಮನಲ್ಲಿ ಲೀನವಾಗಿ ಹೋದರು.

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻



ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಶೃಂಗೇರಿ ದಕ್ಷಿಣಾಮ್ನಾಯ ಪೀಠದ ೩೪ನೇ ಜಗದ್ಗುರುಗಳು. ಜೀವನ್ಮುಕ್ತರೆಂದೇ ಹೆಸರಾಗಿದ್ದ ಇವರು ಸಾಕ್ಷಾತ್ ದಕ್ಷಿಣಾಮೂರ್ತಿಯಂತೆಯೇ ೧೯೧೨ ರಿಂದ ೧೯೫೪ ರವರೆಗೆ ವಿರಾಜಮಾನರಾಗಿದ್ದರು. ಇವರು ಭಕ್ತರನ್ನು ಮೌನದಿಂದಲೇ ಅನುಗ್ರಹಿಸುತ್ತಿದ್ದದ್ದು ವಿಶೇಷವಾಗಿತ್ತು. ಬಾಲ್ಯದಿಂದಲೇ ವೈರಾಗ್ಯಕ್ಕೆ ಅಂಟಿಕೊಂಡ ಜೀವನ. ಸಂನ್ಯಾಸಕ್ಕೆ ಮತ್ತೊಂದು ಹೆಸರು ಎನ್ನುವಂತೆ ಜೀವಿಸಿದ್ದರು.

ಬಾಲ್ಯದಲ್ಲೇ ಅವರ ತಲ್ಲೀನತೆ ಎಷ್ಟಿತ್ತೆಂದರೆ ಒಮ್ಮೆ ಮನೆಗೆ ಸಾಮಾನು ತೆಗೆದುಕೊಂಡು ಬರಲು ಹೋದ ಹುಡುಗ ವೇದಾಂತ ವಿಚಾರದಲ್ಲೇ ಮಗ್ನನಾಗಿ ಅಂಗಡಿಗೆ ಹೋಗುವುದನ್ನು ಮರೆತು ಬಹಳ ದೂರಕ್ರಮಿಸಿಬಿಟ್ಟಿದ್ದ. ಯಾರೋ ಅವನಿಗೆ "ಇದೇನು ಇಷ್ಟು ದೂರ ಬಂದಿದ್ದೀಯ?" ಎಂದು ಕೇಳಿದಾಗಲೇ ಆತನಿಗೆ ತಾನು ಏತಕ್ಕಾಗಿ ಬಂದಿದ್ದು ಎಂಬ ಅರಿವಾಯಿತು. ಸದಾ ದೇವರ ಧ್ಯಾನದಲ್ಲೇ ಇರುತ್ತಿದ್ದ ಬಾಲಕ ಯಾರ ತಂಟೆಗೂ ಹೋಗದೆ ತನ್ನ ಪಾಡಿಗೆ ತಾನು ಇರುವ ಸೌಮ್ಯ ಸ್ವಭಾವದವ. ಬಾಲಕನ ಪ್ರಾಮಾಣಿಕತೆಯು ಅಪ್ರತಿಮವಾದದ್ದು. ಒಮ್ಮೆ ಪರೀಕ್ಷೆಯಲ್ಲಿ ಪ್ರಾಧ್ಯಾಪಕರು

ತಮ್ಮ ಅಚ್ಚುಮೆಚ್ಚಿನ ನರಸಿಂಹ ಶಾಸ್ತ್ರಿಗೆ ಉತ್ತರವನ್ನು ಗುಟ್ಟಾಗಿ ಹೇಳಿ ಹೋದರು. ಆದರೆ ಹುಡುಗ ಆ ಉತ್ತರವನ್ನು ಬರೆದಿರಲಿಲ್ಲ. ನಂತರ ಇದನ್ನು ಗಮನಿಸಿದ ಪ್ರಾಧ್ಯಾಪಕರು ನರಸಿಂಹನನ್ನು ಮನೆಗೆ ಕರೆಸಿ, "ಏಕೆ ನಾನು ಹೇಳಿಕೊಟ್ಟ ಉತ್ತರವನ್ನು ಬರೆಯಲಿಲ್ಲ?" ಎಂದು ಪ್ರಶ್ನಿಸಿದರು. ಅದಕ್ಕೆ ನರಸಿಂಹನು "ನೀವು ಹೇಳಿಕೊಟ್ಟ ಉತ್ತರ ನನ್ನ ಉತ್ತರವಾಗುವುದಿಲ್ಲ ಅದಕ್ಕೆ ಬರೆಯಲಿಲ್ಲ" ಎಂದು ಉತ್ತರಿಸಿ ಗುರುಗಳಿಗೆ ತನ್ನ ಪ್ರಾಮಾಣಿಕತೆಯನ್ನು ಎತ್ತಿ ತೋರಿಸಿದ್ದನು. ಓದುವುದರಲ್ಲಿ ಎಲ್ಲರಿಗಿಂತ ಮುಂದಿದ್ದರೂ ಸ್ವಲ್ಪವೂ ಅಹಂ ಇರಲಿಲ್ಲ. ತನ್ನ ಸಹಪಾಠಿಗಳಿಗೆ ಅರ್ಥವಾಗದ ಪಾಠಗಳನ್ನು ಸ್ವತಃ ತಾನೇ ಹೇಳಿಕೊಡುತ್ತಿದ್ದ.

ನರಸಿಂಹಶಾಸ್ತ್ರಿಯು ಎಷ್ಟು ವಿನಯವಂತನಾಗಿದ್ದನು ಎಂಬುದಕ್ಕೆ ಉದಾಹರಣೆ, ನರಸಿಂಹ ಭಾರತೀ ಸ್ವಾಮಿಗಳ ಕಾಲವಾದ ನಂತರ ನರಸಿಂಹನಿಗೆ ಪಟ್ಟಾಭಿಷೇಕವಾಗಬೇಕಿತ್ತು. ಆಗ ಮಠದ ಆಡಳಿತ ಮಂಡಳಿಯ ಹಲವರು ಅದರ ಕುರಿತಾಗಿ ಚರ್ಚಿಸುತ್ತಿದ್ದರು. ಆಗ ನರಸಿಂಹನೂ ಸಹ ಅಲ್ಲಿ ಇದ್ದ. ಆತನು ನಿಂತಿರುವುದನ್ನು ಗಮನಿಸಿದ ಯಾರೋ ಒಬ್ಬರು, "ಜಗದ್ಗುರುವಾಗಬೇಕಿರುವ ನೀನು ನಿಲ್ಲುವುದು ಸರಿಯಲ್ಲ, ಕುಳಿತುಕೋ" ಎಂದರೆ ನರಸಿಂಹನು "ಅದು ನಾಳೆ" ಎಂದು ನಯವಾಗಿ ಹೇಳಿ ಹಿರಿಯರ ಮುಂದೆ ಕೂರಬಾರದೆಂದು ನಿಂತೇ ಇದ್ದನು. ನರಸಿಂಹ ಭಾರತೀ ಸ್ವಾಮಿಗಳ ಉತ್ತರಾಧಿಕಾರಿಯಾಗಿ ಮಾಡುವ ಸಮಯದಲ್ಲೂ ಮಹಾರಾಜರು ನರಸಿಂಹಶಾಸ್ತ್ರಿಗಳ ಒಪ್ಪಿಗೆ ಕೇಳಿದಾಗ "ಮಠದ ಆಡಳಿತದ ಜವಾಬ್ದಾರಿ ವಹಿಸದೆ ಬರಿ ಅಧ್ಯಾತ್ಮ ಸಾಧನೆಯಲ್ಲಿ ತೊಡಗಲು ಅನುಕೂಲವಾಗುವುದಿದ್ದರೆ ನನ್ನ ಒಪ್ಪಿಗೆ ಇದೆ" ಎಂದು ನುಡಿದಿದ್ದರು. ೨೦ರ ವಯಸ್ಸಿಗೇ ಅಷ್ಟರಮಟ್ಟಿಗೆ ವೈರಾಗ್ಯ ಇತ್ತು.

ಚಂದ್ರಶೇಖರ ಭಾರತೀ ಸ್ವಾಮಿಗಳು ಜಗದ್ಗುರುಗಳಾದ ಮೊದಲ ದಿವಸದಿಂದಲೇ ಸಾಧನೆಯಲ್ಲಿ ನಿರತರಾದರು. ಗುರುವರ್ಯರು ಮೊದಲ ನಾಲ್ಕು ವರ್ಷದಲ್ಲಿ ಅಧ್ಯಯನ, ಪೂಜೆಯ ಜೊತೆಗೆ ತಪೋನುಷ್ಠಾನಗಳಲ್ಲೂ ನಿರತರಾಗಿದ್ದರು. ೧೯೧೬ ನೇ ಇಸವಿಯಲ್ಲಿ ನಡೆದ ಶಾರದಾಂಬೆಯ ಕುಂಭಾಭಿಷೇಕದ ನಂತರ ಸಂಪೂರ್ಣವಾಗಿ ಲೌಕಿಕ ನಿರಾಸಕ್ತಿ ಹೊಂದಿ, ಸದಾಕಾಲ ಏಕಾಂತವಾಗಿ ಧ್ಯಾನನಿರತರಾಗಿದ್ದರು. ವೈರಾಗ್ಯದ ಪರಾಕಾಷ್ಠೆಯನ್ನು ಮುಟ್ಟಿ ಅವಧೂತ ಸ್ಥಿತಿ ತಲುಪಿದ್ದರು.

ಗುರುಗಳು ಪಾಠ ಮಾಡುತ್ತಿದ್ದ ರೀತಿಯೂ ಬಹಳ ವೈಶಿಷ್ಟ್ಯವಾದದ್ದು. ಯಾರಿಗಾದರೂ ಯಾವುದಾದರೂ ವಿಷಯ ಅರ್ಥವಾಗದಿದ್ದರೆ ಅದನ್ನು ಉಚ್ಚ ಸ್ವರದಲ್ಲಿ ಓದಲು ಹೇಳುತ್ತಿದ್ದರು. ಓದಿ ಮುಗಿಸುವ ಮುನ್ನವೇ ಅವರಿಗೆ ಅರ್ಥವಾಗಿಬಿಡುತ್ತಿತ್ತು. ಎಂದಿಗೂ ಪಾಠಮಾಡುವಾಗ ಆತುರ ಮಾಡುತ್ತಿರಲಿಲ್ಲ. ನಿಧಾನವಾಗಿ ಅರ್ಥವಾಗುವವರೆಗೂ ವಿವರಿಸುತ್ತಿದ್ದರು.

ಪೂಜೆ ಮಾಡುವಾಗಲಂತೂ ಅತ್ಯಂತ ತನ್ಮಯತೆಯಿಂದ ಮಾಡುತ್ತಿದ್ದರು. ತಾವು ಪೂಜೆ ಮಾಡುತ್ತಿರುವುದು ಮೂರ್ತಿಗಲ್ಲ, ಸಾಕ್ಷಾತ್ ಶಿವನಿಗೆ ಮಾಡುತ್ತಿದ್ದೇನೆ ಎಂಬ ಭಾವ ಇರುತ್ತಿತ್ತು. ಒಮ್ಮೆ ಪೂಜಾಸಾಮಗ್ರಿಗಳನ್ನು ತೊಳೆಯುತ್ತಿದ್ದ ಪುರೋಹಿತರು, ಬಲವಂತವಾಗಿ ತಿಕ್ಕಿ ತಿಕ್ಕಿ ಒರೆಸುತ್ತಿದ್ದರು. ಅದನ್ನು ಗಮನಿಸಿದ ಗುರುಗಳು, "ನಾವು ಸ್ನಾನ ಮಾಡಿದಮೇಲೆ ಹೇಗೆ ನಿಧಾನವಾಗಿ ಒರೆಸಿಕೊಳ್ಳುತ್ತೇವೋ, ಅದೇ ರೀತಿ ಒರೆಸಬೇಕು, ಅದು ಕೇವಲ ವಿಗ್ರಹವಲ್ಲ, ಸಾಕ್ಷಾತ್ ಪರಮೇಶ್ವರ' ಎಂದು ನುಡಿದಿದ್ದರು. ಹೀಗೆ ಅದನ್ನು ಕೇವಲ ವಿಗ್ರಹವೆಂದುಕೊಳ್ಳದೆ ದೇವರಿಗೆ ಪೂಜೆ ಮಾಡುತ್ತಿದ್ದೇವೆ ಎಂಬ ಭಾವನೆ ಅವರಲ್ಲಿರುತ್ತಿತ್ತು.

ಒಮ್ಮೆ ಮಲಹಾನಿಕರೇಶ್ವರ ದೇವಸ್ಥಾನದಲ್ಲಿ ಗುರುಗಳು ಪೂಜೆ ಮಾಡುತ್ತಿದ್ದರು. ಗರ್ಭಗುಡಿ ಕಿರಿದಾಗಿದ್ದರಿಂದ ಇಕ್ಕಟ್ಟಿನಲ್ಲೇ ಕುಳಿತುಕೊಳ್ಳಬೇಕಾಗಿತ್ತು. ಗಾಳಿ ಬೆಳಕು ಸಹ ಕಮ್ಮಿ ಇತ್ತು. ಅದು ಬಿರುಬೇಸಿಗೆಯ ಸಮಯ. ಪರಿಚಾರಕರು ಶಖೆಯನ್ನು ತಡೆಯಲಾರದೆ, ಘಳಿಗೆಗೊಮ್ಮೆ ಹೊರಬರುತ್ತಿದ್ದರು. ಆದರೆ ಗುರುಗಳು ಬೆಳಗ್ಗೆಯಿಂದ ಸಂಜೆಯವರೆಗೆ ಒಮ್ಮೆಯೂ ಅತ್ತಿತ್ತ ಕದಲದೆ ತದೇಕ ಚಿತ್ತದಿಂದ ಪೂಜೆಮಾಡುತ್ತಿದ್ದರು.

ಗುರುಗಳು ರಾಮಾಯಣವನ್ನು ಪಾರಾಯಣ ಮಾಡುವಾಗ ಅವರ ಮುಂದೆ ಒಂದು ಮಣೆ ಇಟ್ಟುಕೊಂಡಿರುತ್ತಿದ್ದರಂತೆ. ಏಕೆಂದರೆ ಎಲ್ಲಿ ರಾಮನಿರುತ್ತಾನೋ, ಅಲ್ಲಿ ಹನುಮಂತ ಬಂದೇ ಬರುತ್ತಾನೆ ಎಂದು ಅವರ ಬಲವಾದ ನಂಬಿಕೆಯಾಗಿತ್ತು. ಹೀಗಾಗಿ ರಾಮಾಯಣ ಪಾರಾಯಣ ಮಾಡಿದರೆ ಹನುಮಂತ ಬರುತ್ತಾನಾದ್ದರಿಂದ ಆತನಿಗೆ ಕೂರಲು ಒಂದು ಮಣೆ ಹಾಕುತ್ತಿದ್ದರಂತೆ.

ಶ್ರೀ ಗುರುವರ್ಯರು ಬಾಯಿ ಮಾತಿಗಿಂತ ಅನುಷ್ಠಾನಕ್ಕೆ ಮಹತ್ವ ಕೊಡುತ್ತಿದ್ದರು. ಒಮ್ಮೆ ಒಬ್ಬ ಭಕ್ತರು ಗುರುಗಳ ದರ್ಶನಕ್ಕೆ ಬಂದಿದ್ದರು. ಅವರು ಮಹಾನ್ ಮೇಧಾವಿಗಳಾಗಿದ್ದರು. ಶಂಕರರ ಉಪದೇಶವನ್ನು ಜಗತ್ತಿಗೆ ಸಾರುವ ಮಹತ್ತರ ಕಾರ್ಯವನ್ನು ಕೈಗೊಂಡಿದ್ದರು. ಗುರುಗಳು ಅವರಿಗೆ "ಪ್ರವಚನಗಳೆಲ್ಲವೂ ಚನ್ನಾಗಿ ನಡೆಯುತ್ತಿವೆಯೇ" ಎಂದು ಕೇಳಿದರು. ಅದಕ್ಕೆ ಅವರು "ಹೌದು" ಎಂದು ಅಭಿಮಾನದಿಂದ ಹೇಳಿಕೊಂಡರು. "ನಿತ್ಯ ಔಪಾಸನೆ ಮಾಡುತ್ತಿದ್ದೀರೋ?" ಎಂದು ಕೇಳಿದರು. ಅದಕ್ಕವರು "ನಾನು ದೊಡ್ಡ ಊರಿನಲ್ಲಿದ್ದು ನಮ್ಮ ಊರಿನಲ್ಲಿ ಬೆರಣಿಯೇ ಸಿಗುತ್ತಿಲ್ಲ ಆದ್ದರಿಂದ ಔಪಾಸನೆ ನಡೆಸಲು ಸಾಧ್ಯವಾಗುತ್ತಿಲ್ಲ" ಎಂದು ನುಡಿದರು. ಅದಕ್ಕೆ ಗುರುಗಳು "ನಿಮ್ಮ ಊರಿನಲ್ಲಿ ಹಸು, ಕಾಫಿ ಕುಡಿಯಲು ಹಾಲು ಕೊಡುತ್ತದೆ ಆದರೆ ಬೆರಣಿಗೆ ಸಗಣಿ ಹಾಕುವುದಿಲ್ಲವೇ?" ಎಂದು ಮಂದಸ್ಮಿತರಾಗಿಯೇ ಮನಸ್ಸಿಗೆ ನಾಟುವಂತೆ ಕೇಳಿದರು. ಆ ಮಾತನ್ನು ಕೇಳಿದ ಭಕ್ತರಿಗೆ ಪೇಚಾದಂತೆ ಆಯಿತು. ಗುರುಗಳು ಮುಂದುವರಿಸಿ "ನೂರು

ಉಪನ್ಯಾಸ ಕೊಡುವುದಕ್ಕಿಂತ, ಕೇಳುವುದಕ್ಕಿಂತ ಒಂದನ್ನು ಅನುಷ್ಠಾನ ಮಾಡುವುದು ಒಳ್ಳೆಯದು, ನೀವು ಯಾವುದನ್ನು ಅನುಷ್ಠಾನದಲ್ಲಿ ಇಟ್ಟುಕೊಂಡಿರುತ್ತೀರೋ ಅದನ್ನು ಮಾತ್ರ ಬೇರೆಯವರಿಗೆ ಹೇಳಲು ಅರ್ಹರು" ಎಂದು ನುಡಿದರು. ಆಗ ಆ ಭಕ್ತರಿಗೆ ತಮ್ಮ ತಪ್ಪಿನ ಅರಿವಾಗಿ ಗುರುಗಳಿಗೆ "ಇನ್ನು ಮುಂದೆ ಎಂದೂ ಹೀಗೆ ಮಾಡುವುದಿಲ್ಲ" ಎಂದು ಭರವಸೆ ಕೊಟ್ಟರು.

ಮತ್ತೊಂದು ಸಂದರ್ಭದಲ್ಲಿ ಒಬ್ಬ ಭಕ್ತರು ಗುರುವರ್ಯರ ದರ್ಶನಕ್ಕೆ ಬಂದಿದ್ದರು. ಒಂದೆರಡು ಮಾತುಗಳ ನಂತರ ಸಂಧ್ಯಾವಂದನೆಯ ಕಡೆಗೆ ಮಾತು ಹೊರಳಿತು. ಗುರುಗಳು "ನಿತ್ಯ ಸಂಧ್ಯಾವಂದನೆ ಮಾಡುತ್ತಿದ್ದೀರೋ?" ಎಂದು ಕೇಳಿದರು. ಅದಕ್ಕವರು "ನನಗೆ ಸಂಧ್ಯಾವಂದನೆ ಮಂತ್ರದ ಅರ್ಥ ಗೊತ್ತಿಲ್ಲ, ಆದ್ದರಿಂದ ಸಂಧ್ಯಾವಂದನೆ ಮಾಡುವುದನ್ನೇ ನಿಲ್ಲಿಸಿದ್ದೇನೆ ಎಂದರು.

ಗುರುಗಳು:  "ಅರ್ಥ ಗೊತ್ತಿಲ್ಲದಿದ್ದರೆ ಕೇಳಿ ತಿಳಿದುಕೊಳ್ಳಬಹುದಿತ್ತಲ್ಲಾ?"

ಭಕ್ತ: ನಮ್ಮ ಊರಿನಲ್ಲಿ ಅರ್ಥ ಗೊತ್ತಿದ್ದವರು ಯಾರೂ ಇರಲಿಲ್ಲ.

ಗುರುಗಳು: ಒಹೋ ಹಾಗೇನು? ನೀವು ಏನು ಕೆಲಸ ಮಾಡುತ್ತಿದ್ದೀರ?

ಭಕ್ತ: ---------ಊರಿನಲ್ಲಿ --------- ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದೇನೆ

ಗುರುಗಳು: ನಿಮ್ಮ ವಿದ್ಯಾಭ್ಯಾಸ?

ಭಕ್ತ: ಡಿಗ್ರಿ ಮಾಡಿದ್ದೇನೆ.

ಗುರುಗಳು: ಎಲ್ಲಿ?

ಭಕ್ತ: --------- ಊರಿನಲ್ಲಿ (ಊರಿನ ಹೆಸರು ಹೇಳಿದರು)

ಗುರುಗಳು: ಪ್ರಾಥಮಿಕ ಶಾಲೆ ಎಲ್ಲಿ ಆಯಿತು?

ಭಕ್ತ: --------- ಊರಿನಲ್ಲಿ (ಬೇರೊಂದು ಊರಿನ ಹೆಸರು ಹೇಳಿದರು)

ಗುರುಗಳು: ಬಾಲ್ಯದ ವಿದ್ಯಾಭ್ಯಾಸ?

ಭಕ್ತ: ನಮ್ಮ ಊರಿನಲ್ಲೇ

ಗುರುಗಳು: ಏಕೆ? ನೀವು ಡಿಗ್ರಿಯನ್ನು ನಿಮ್ಮ ಊರಿನಲ್ಲೇ ಮಾಡಬಹುದಿತ್ತಲ್ಲಾ?

ಭಕ್ತ: ನಮ್ಮ ಊರಿನಲ್ಲಿ ಆ ಸೌಕರ್ಯ (ಕಾಲೇಜು) ಇರಲಿಲ್ಲ

ಗುರುಗಳು: ಅಂದರೆ ನಿಮಗೆ ಲೌಕಿಕ ಜೀವನದಲ್ಲಿ ಇರುವ ಆಸಕ್ತಿ ಅಧ್ಯಾತ್ಮ ವಿಷಯದಲ್ಲಿ ಇಲ್ಲ ಎಂದಂತಾಯಿತು. ನಿಮ್ಮ ಊರಿನಲ್ಲಿ ವಿದ್ಯಾಭ್ಯಾಸಕ್ಕೆ ಸೌಕರ್ಯವಿಲ್ಲವೆಂದು ಬೇರೆ ಊರಿಗೆ ಹೋಗಿ ಕಲಿತು ಬಂದಿರಿ. ಈಗ ಮತ್ತೊಂದು ಊರಿನಲ್ಲಿ ಕೆಲಸ ಮಾಡುತ್ತಿದ್ದೀರಿ. ಆದರೆ ಸಂಧ್ಯಾವಂದನೆಯ ಅರ್ಥವನ್ನು ಮಾತ್ರ ನಿಮ್ಮ ಊರಿಗೇ ಯಾರಾದರೂ ಬಂದು ಹೇಳಿಕೊಡಬೇಕಾಗಿತ್ತಲ್ಲವೇ?

ಭಕ್ತ: (ಮೌನ)

ಗುರುಗಳು: ಹೌದು, ಸಂಧ್ಯಾವಂದನೆಯ ಅರ್ಥ ತಿಳಿದುಕೊಂಡು ಮಾಡಿದರೆ ಹೆಚ್ಚು ಪ್ರಯೋಜನ. ಆದರೆ ಅರ್ಥ ಗೊತ್ತಿಲ್ಲದೇ ಇದ್ದರೂ ಅದನ್ನು ಮಾಡಿಯೇ ತೀರಬೇಕು. ಸಂಧ್ಯಾವಂದನೆಯ ಅರ್ಥ ತಿಳಿದು ಮಾಡಿದರೆ ಮೃಷ್ಟಾನ್ನ ಭೋಜನ ಮಾಡಿದಂತೆ. ತಿಳಿಯದೆ ಮಾಡಿದರೆ ಸಾಧಾರಣ ಭೋಜನ ಮಾಡಿದಂತೆ. ಹೇಗೆ ನಾವು ಮೃಷ್ಟಾನ್ನ ಇಲ್ಲದಿದ್ದರೂ ಸಾಧಾರಣ ಊಟವನ್ನು ಮಾಡಿಯೇ ಮಾಡುತ್ತೇವೋ ಅದೇ ರೀತಿ ಅರ್ಥ ಗೊತಿಲ್ಲದಿದ್ದರೂ ಸಂಧ್ಯಾವಂದನೆಯನ್ನು ಮಾಡಲೇಬೇಕು.

ಭಕ್ತ: ಈಗ ನನಗೆ ಸಂಪೂರ್ಣವಾಗಿ ಮನವರಿಕೆಯಾಯಿತು. ಇನ್ನು ಮುಂದೆ ಬಿಡದೆ ಸಂಧ್ಯಾವಂದನೆಯನ್ನು ಮಾಡುತ್ತೇನೆ. ಅದರ ಅರ್ಥವನ್ನೂ ಸಹ ಹುಡುಕಿ ತಿಳಿದುಕೊಳ್ಳಲು ಪ್ರಯತ್ನಿಸುತ್ತೇನೆ.

ಹೀಗೆ ಗುರುಗಳು ಮಾತಿನಲ್ಲೇ ಜನಗಳ ಅಜ್ಞಾನವನ್ನು ಓಡಿಸಿ ಮನಃಪರಿವರ್ತನೆ ಮಾಡುತ್ತಿದ್ದರು.

ಯಾವುದೇ ಗುರುಗಳಾದರೂ ವಿಜಯ ಯಾತ್ರೆಯ ಸಂಚಾರ ಕೈಗೊಳ್ಳುವುದು, ಭಕ್ತ ಜನರಿಗೆ ಉಪದೇಶ ಮಾಡುವುದು, ಅವರ ಕಷ್ಟಗಳನ್ನು ಅರಿತು ಅದಕ್ಕೆ ಪರಿಹಾರ ಸೂಚಿಸುವುದು, ಅಧ್ಯಾತ್ಮಿಕವಾಗಿ ಯಾರಿಗಾದರೂ ಸಂದೇಹವಿದ್ದರೆ ಅದನ್ನು ಬಗೆಹರಿಸುವುದು ವಾಡಿಕೆ. ಆದರೆ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಹೆಚ್ಚು ಪ್ರವಾಸವನ್ನೂ ಮಾಡುತ್ತಿರಲಿಲ್ಲ ಮತ್ತು ಹೆಚ್ಚು ಮಾತನ್ನೂ ಸಹ ಆಡುತ್ತಿರಲಿಲ್ಲ. ಕೇವಲ ಮೌನದಿಂದಲೇ, ಒಂದು ಮಂದಹಾಸದಿಂದಲೇ ಭಕ್ತ ಜನರನ್ನು ಅನುಗ್ರಹಿಸುತ್ತಿದ್ದರು. ಭಕ್ತರು ತಮ್ಮ ಸಂದೇಹ ನಿವಾರಿಸಿಕೊಳ್ಳಲು ಗುರುಗಳ ಬಳಿ ಬಂದು ಯಾವುದೇ ಪ್ರಶ್ನೆಯನ್ನೂ ಕೇಳದೆ ಅವರ ಸಾನಿಧ್ಯದಿಂದಲೇ ಸಂದೇಹಗಳನ್ನು ಬಗೆಹರಿಸಿಕೊಂಡ ಉದಾಹರಣೆಗಳು ಎಷ್ಟೋ ಇವೆ. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಭಕ್ತರ ಪಾಲಿಗೆ ಕೇವಲ ಗುರುಗಳಾಗಿರದೆ ಸಾಕ್ಷಾತ್ ಪರಮೇಶ್ವರನಾಗಿದ್ದರು. ಕಷ್ಟದಲ್ಲಿ ಇದ್ದವರು ಗುರುಗಳ ಬಳಿಯೇ ಬಂದು ಅವರ ಆಶೀರ್ವಾದವನ್ನು ಪಡೆದೋ, ಅವರು ಕೊಡುವ ಪ್ರಸಾದವನ್ನು ಸ್ವೀಕರಿಸಿಯೋ

ತಮ್ಮ ತೊಂದರೆಗಳನ್ನು ಪರಿಹರಿಸಿಕೊಳ್ಳಬೇಕೆಂದೇನೂ ಇರಲಿಲ್ಲ. ಭಕ್ತಿಯಿಂದ ಗುರುಗಳನ್ನು ನೆನೆದರೇ ಸಾಕಾಗಿತ್ತು, ತಮ್ಮ ಕಷ್ಟಗಳೆಲ್ಲ ಪರಿಹಾರವಾಗುತ್ತಿದ್ದವು. ಈ ರೀತಿ ಗುರುಗಳನ್ನು ಭಕ್ತಿಯಿಂದ ನೆನೆದು ಅವರ ಪ್ರೇರಣೆಯನ್ನು ಪಡೆದು ಅನೇಕ ಕಷ್ಟಗಳನ್ನು ಪರಿಹಾರ ಮಾಡಿಕೊಂಡ ಭಕ್ತರು ಈಗಲೂ ಎಷ್ಟೋ ಜನ ಇದ್ದಾರೆ.

ಸಾಮಾನ್ಯವಾಗಿ ಗುರುಗಳು ಅರ್ಧ ಕಣ್ಣು ಮುಚ್ಚಿಕೊಂಡಿರುತ್ತಿದ್ದರಂತೆ. ಒಂದು ವೇಳೆ ಗುರುಗಳ ದೃಷ್ಟಿ ಭಕ್ತರ ಮೇಲೆ ಬಿದ್ದರೆ ಅಷ್ಟೇ ಸಾಕು ಅವರ ಜೀವನ ಸಾರ್ಥಕವಾಗುತ್ತಿತ್ತು. ಶ್ರೀ ಕೃಷ್ಣನು ಅರ್ಜುನನಿಗೆ ತನ್ನ ವಿಶ್ವರೂಪವನ್ನು ದರ್ಶನ ಮಾಡಿಸಿದಾಗ ಅರ್ಜುನನಿಗೆ ಅದನ್ನು ತನ್ನ ಕಣ್ಣಿನಿಂದ ನೇರವಾಗಿ ನೋಡಲು ಸಾಧ್ಯವಾಗಲಿಲ್ಲ. ಆಗ ಶ್ರೀ ಕೃಷ್ಣನೇ ಅರ್ಜುನನಿಗೆ ನೋಡಲು ಯೋಗ್ಯವಾಗಿರುವ ಕಣ್ಣುಗಳನ್ನು ನೀಡಿ ಅದರ ದರ್ಶನ ಮಾಡಿಸಿದ್ದನು. ಅದೇ ರೀತಿ ಸಾಮಾನ್ಯರು, ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನು ನೇರವಾಗಿ ದೃಷ್ಟಿಸಿ ನೋಡಲೂ ಅಸಾಧ್ಯವಾಗುತ್ತಿತ್ತು. ಅವರ ಮುಖ ಅಷ್ಟು ಪ್ರಜ್ವಲಿಸುತ್ತಿತ್ತಂತೆ. ಅಂತಹ ತೇಜೋಮಯರಾಗಿದ್ದ ಗುರುವರ್ಯರನ್ನು ದರ್ಶಿಸಿದ ಅನೇಕ ಭಕ್ತರು ನೀಡಿದ ಒಮ್ಮತದ ಸಮ್ಮತಿ ಇದು.

ಗುರುವರ್ಯರು ೧೯೨೪ ರಿಂದ ೧೯೨೭ ರವರೆಗೆ ಮತ್ತು ೧೯೩೮ ರಿಂದ ೧೯೪೦ರವರೆಗೆ ವಿಜಯಯಾತ್ರೆಯ ಸಂದರ್ಭದಲ್ಲಿ ಬಿಟ್ಟರೆ ಮಿಕ್ಕೆಲ್ಲಾ ಕಾಲದಲ್ಲೂ ಸದಾ ಆತ್ಮಧ್ಯಾನದಲ್ಲೇ ನಿರತರಾಗಿದ್ದರು. ಯಾವಾಗಲೂ ಅಂತರ್ಮುಖಿಗಳಾಗಿರುತ್ತಿದ್ದ ಗುರುಗಳು ವಿಜಯ ಯಾತ್ರೆಯ ಸಂದರ್ಭದಲ್ಲಿ ಒಮ್ಮೆಯೂ ಅಂತರ್ಮುಖರಾಗಲಿಲ್ಲ. ಯಾತ್ರೆಯು ಮುಗಿಯುವವರೆಗೂ ಬಹಿರ್ಮುಖರಾಗಿದ್ದು ಭಕ್ತರನ್ನು ಅನುಗ್ರಹಿಸುತ್ತಿದ್ದರು.

ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಗೆ ಒಬ್ಬ ವ್ಯಕ್ತಿಯು ಜೀವನ ನಡೆಸಬೇಕು ಎಂದು ಹೇಳಿರುವನೋ, ಅದೇ ರೀತಿಯ ಗುಣಗಳು ಇರುವ ಒಂದು ವ್ಯಕ್ತಿಯನ್ನು ಕಾಣಬೇಕಾದರೆ ಅದು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳಾಗುವುದರಲ್ಲಿ ಅನುಮಾನವೇ ಇಲ್ಲ. ಚಂದ್ರಶೇಖರ ಭಾರತೀ ಸ್ವಾಮಿಗಳ ಜೀವನ ಚರಿತ್ರೆಯನ್ನು ಒಂದೇ ಸಾಲಿನಲ್ಲಿ ಹೇಳುವುದಾದರೆ ಧ್ಯಾನ, ಸಾಧನೆ, ತಪಸ್ಸು. ತಪಸ್ಸು, ಸಾಧನೆ, ಧ್ಯಾನ.

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

# ❀ ಲೇಖಕನ ಅಂತರಂಗ ❀

ಎಲ್ಲರೂ ಕಷ್ಟ ಬಂದ ತಕ್ಷಣ ಗುರುಗಳ ಮೊರೆ ಹೋದರೆ ಎಲ್ಲಾ ಸರಿಹೋಗುತ್ತದೆ ಎಂದುಕೊಳ್ಳುತ್ತಾರೆ. ಆದರೆ ಅದು ತಪ್ಪು ಕಲ್ಪನೆ. ಹಾಗಾದರೆ ಗುರುಗಳ ಮೊರೆ ಹೋದರೆ ಏನು ಉಪಯೋಗ? ಗುರುಗಳು ಇದಕ್ಕೆ ಏನೂ ಮಾಡಲು ಸಾಧ್ಯವಿಲ್ಲವೇ? ಎಂದರೆ ಅದಕ್ಕೆ ಉತ್ತರ "ಸಾಧ್ಯವಿದೆ". ನಾವು ಏನು ಕೇಳಿದರೂ ಅದನ್ನು ನೀಡುವ ಶಕ್ತಿ ಗುರುಗಳಿಗೆ ಇರುತ್ತದೆ. ಆದರೆ ಅದನ್ನು ಪಡೆದುಕೊಳ್ಳುವ ಯೋಗ್ಯತೆ ನಮಗಿರಬೇಕಲ್ಲ? ನಮ್ಮ ಕರ್ಮಕ್ಕೆ ಅನುಸಾರವಾಗಿ ನಮಗೆ ಫಲ ನೀಡುವ ಜವಾಬ್ದಾರಿ ದೇವರದ್ದು. ಒಂದು ವೇಳೆ ಗುರುವು ಅದೆಲ್ಲವನ್ನು ಪರಿಹರಿಸಿದರೆ ಅದು ಪ್ರಕೃತಿಗೆ ವಿರೋಧವಾಗುತ್ತದೆ. ಆಗ ಈ ಜಗತ್ತಿನಲ್ಲಿ ಸಾವು ನೋವು, ಕಷ್ಟಗಳು ಇರುವುದೇ ಇಲ್ಲ. ನಮ್ಮ ಪಾಲಿಗೆ ಬಂದ ಕರ್ಮವನ್ನು ನಾವು ಅನುಭವಿಸಲೇ ಬೇಕು. ಗುರುಗಳು ನಮಗೆ ಬಂದಿರುವ ಕಷ್ಟವನ್ನು ಪರಿಹಾರ ಮಾಡುವುದಿಲ್ಲ ಬದಲಿಗೆ ಕಷ್ಟಗಳನ್ನು ಎದುರಿಸುವ ಶಕ್ತಿಯನ್ನು ನೀಡುತ್ತಾರೆ. ಮತ್ತು ಪ್ರೇರಣೆಯ ಮೂಲಕ ನಮ್ಮನ್ನು ಕಾಪಾಡುತ್ತಾರೆ. ಉದಾಹರಣೆಗೆ ನಿಮಗೆ

ಯಾವುದಾದರೂ ಒಂದು ರೋಗ ಬಂತು ಎಂದುಕೊಳ್ಳಿ. ಗುರುಗಳು ಆ ರೋಗವನ್ನು ವಾಸಿಮಾಡುವುದಿಲ್ಲ. ಬದಲಿಗೆ ಯಾವ ವೈದ್ಯರಿಗೆ ತೋರಿಸಿದರೆ ವಾಸಿಯಾಗುತ್ತದೆ ಎಂದು ಪ್ರೇರಣೆ ಕೊಡುವುದರ ಮೂಲಕ ತಿಳಿಸುತ್ತಾರೆ ಅಥವಾ ಯಾರಾದರೂ ನಿಮಗೆ ಇಂಥ ವೈದ್ಯರ ಬಳಿಗೆ ಹೋಗಿ ಎಂದು ಸಲಹೆ ಕೊಡುತ್ತಾರೆ. ನೀವು ಪರೀಕ್ಷೆ ಬರೆಯುತ್ತಿದ್ದೀರ ಎಂದಿಟ್ಟುಕೊಳ್ಳಿ. ಆಗ ನಿಮಗೆ ಗುರುಗಳು ಉತ್ತರವನ್ನು ತಿಳಿಸುವುದಿಲ್ಲ ಬದಲಿಗೆ ನೀವು ಓದಿರುವುದರಲ್ಲೇ ಪ್ರಶ್ನೆಯನ್ನು ಕೇಳುವಂತೆ ಮಾಡುತ್ತಾರೆ. ಇದೇ ರೀತಿ ಎಲ್ಲದರಲ್ಲೂ ಪ್ರೇರಣೆ ಮೂಲಕ ನಮಗೆ ಅನುಕೂಲ ಮಾಡಿಕೊಡುತ್ತಾರೆ. ಆದರೆ ಸಂಪೂರ್ಣವಾಗಿ ಗುರುಗಳ ಮೇಲೇ ಅವಲಂಬಿಸದೆ ನಮ್ಮ ಪ್ರಯತ್ನವನ್ನು ಮಾಡಬೇಕು.

ಎಲ್ಲರೂ ಸಾಮಾನ್ಯವಾಗಿ, ನಾವು ದೇವರ ಮುಂದೆ ಕೂತು ಪೂಜೆಮಾಡುತ್ತಿದ್ದರೆ ಎಲ್ಲವೂ ನಡೆಯುತ್ತದೆ ಎಂದು ಭಾವಿಸುತ್ತಾರೆ. ಆದರೆ ಹಾಗಲ್ಲ, ಪೂಜೆಯು ಜೀವನದ ಒಂದು ಭಾಗವಾಗಬೇಕೇ ಹೊರತು ಅದನ್ನು ಪೂರಾ ದಿನ ಮಾಡುತ್ತಾ ಕೂರುವುದಲ್ಲ ಎಂದು ಭಗವಂತನೇ ಹೇಳಿದ್ದಾನೆ. ನಿನ್ನ ಕೆಲಸವನ್ನು (ಕರ್ಮ) ನೀನು ಮಾಡು ಎಂದೇ ಭಗವಂತನು ಹೇಳಿರುವುದು. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನೇ ಹೇಳಿರುವಂತೆ ಒಂದು ಕಾರ್ಯ ಯಶಸ್ವಿಯಾಗಬೇಕಾದರೆ ಐದು ಅಂಶಗಳು ಮುಖ್ಯವಾಗುತ್ತವೆ. ಮೊದಲನೆಯದು ಶರೀರ (ಅಧಿಷ್ಠಾನ). ಎರಡನೆಯದು ಕರ್ತಾ (ಮನಃಶಕ್ತಿ). ಮೂರನೆಯದು ಇಂದ್ರಿಯಗಳ ಶಕ್ತಿ, ನಾಲ್ಕನೆಯದು ಬಾಹ್ಯ ಚಟುವಟಿಕೆಗಳು. ಐದನೇ ಅಂಶವೇ ದೈವ. ಅಂದರೆ ನಾಲ್ಕು ಅಂಶಗಳು ನಮ್ಮ ಪ್ರಯತ್ನದಿಂದ ಆದರೆ, ಐದನೇ ಒಂದು ಅಂಶ ಪರಮಾತ್ಮ ನೋಡಿಕೊಳ್ಳುತ್ತಾನೆ.

ಒಮ್ಮೆ ನನಗೆ ಗುರುಗಳು ಕನಸಿನಲ್ಲಿ ಬಂದು ದೇಹತ್ಯಾಗ ಮಾಡಿದ ದಿನದ ಘಟನೆಯನ್ನು ದರ್ಶನ ಮಾಡಿಸಿದ್ದರು. ಅದಾದ ನಂತರ ನನಗೆ ಹಲವು ಬಾರಿ ಕನಸಿನಲ್ಲಿ ಬಂದದ್ದೂ ಉಂಟು. ನಾನು ಗುರುಗಳ ಬಗ್ಗೆ ತಿಳಿದುಕೊಳ್ಳಲು ಪ್ರಾರಂಭಿಸಿದ ಮೇಲೆ ನಾನು ಎಲ್ಲೇ ಹೋದರೂ ಯಾರಾದರೂ ಒಬ್ಬರು ಗುರುಭಕ್ತರ ಪರಿಚಯವಾಗಿ ಗುರುಗಳ ವಿಷಯ ಪ್ರಸ್ತಾವನೆಯಾಗಲು ಶುರುವಾಗುತ್ತಿತ್ತು. ಗುರುಗಳ ಬಗ್ಗೆ ನಾನು ತಿಳಿದುಕೊಳ್ಳಲು ಎಲ್ಲಾ ಅನುಕೂಲಗಳೂ ಒದಗಿ ಬಂದವು.

ನನಗೆ ಒಂದು ದಿನ ಗುರುಗಳ ಧ್ವನಿ ಕೇಳುವ ಆಸೆ ಬಂತು. ಅಂದೇ ರಾತ್ರಿ ಕನಸಿನಲ್ಲಿ ಗುರುಗಳು ಮಾತನಾಡುತ್ತಿರುವ ಕನಸು ಬಿತ್ತು. ಇನ್ನೊಮ್ಮೆ ನನಗೆ ಸಂಧ್ಯಾವಂದನೆ ಮಾಡುವಾಗ ಗಾಯತ್ರೀ ಜಪ ಮಾಡುವ ವಿಚಾರವಾಗಿ ಒಂದು ಅನುಮಾನ ಬಂದಿತ್ತು. ಅಂದು ಸಹ ಗುರುಗಳು ನನ್ನ ಕನಸಿನಲ್ಲಿ ಬಂದು ಸ್ವತಃ ತಾವೇ ಸಂಧ್ಯಾವಂದನೆ ಮಾಡಿ ತೋರಿಸಿದಂತೆ ಕನಸು ಬಿದ್ದಿತ್ತು. ಈ ರೀತಿ ಹಲವಾರು ಬಾರಿ ನನಗೆ ಆಗಿದೆ. ನಾವು

ಪ್ರಾಮಾಣಿಕವಾಗಿ ಗುರುಗಳನ್ನು ನಂಬಿ ಆಶ್ರಯಿಸಿದರೆ, ನಮಗೆ ಯಾವುದಾದರೂ ರೂಪದಲ್ಲಿ ಬಂದು ನಮ್ಮ ಸಮಸ್ಯೆಯನ್ನು ಪರಿಹರಿಸುವುದರಲ್ಲಿ ಅನುಮಾನವೇ ಇಲ್ಲ.

ನಾನು ಚಿಕ್ಕ ವಯಸ್ಸಿನಿಂದಲೂ ಒರಟ ಮತ್ತು ಬಹಳ ಬೇಗ ಸಿಟ್ಟು ಬರುತ್ತಿತ್ತು. ಮನೆಯಲ್ಲಿ ಏನಾದರೂ ಸ್ವಲ್ಪ ಬೈದರೂ ಸಾಕು, ಮನೆ ಬಿಟ್ಟು ಹೋಗುವುದಾಗಿ ಹೆದರಿಸುತ್ತಿದ್ದೆ. ನನ್ನ ಅಪ್ಪ, ಅಮ್ಮ ನನ್ನನ್ನು ಚಿಕ್ಕ ವಯಸ್ಸಿನಿಂದಲೂ ಬಹಳ ಚೆನ್ನಾಗಿ ನೋಡಿಕೊಳ್ಳುತ್ತಿದ್ದಾರೆ. ಬಹುಶಃ ನನ್ನ ತಂದೆ, ತಾಯಿ, ನನ್ನನ್ನು ನೋಡಿಕೊಂಡ ಹಾಗೆ ಯಾರೂ ಅವರ ಮಕ್ಕಳನ್ನು ನೋಡಿಕೊಳ್ಳಲು ಸಾಧ್ಯವಿಲ್ಲ ಎನ್ನುವುದು ನನ್ನ ಅನಿಸಿಕೆ. ಆದರೂ ನಾನು ಅವರಿಗೆ ಕೊಟ್ಟ ಕಾಟ ಅಷ್ಟಿಷ್ಟಲ್ಲ. ನನ್ನ ಅಣ್ಣ ತುಂಬಾ ಮೃದು ಸ್ವಭಾವದವ. ಅದಕ್ಕಾಗಿ ನಮ್ಮ ಮನೆಯಲ್ಲಿ ಅವನಿಗೆ ಬಯ್ಯುತ್ತಿದ್ದಿದ್ದು ಕಡಿಮೆ. ಅದನ್ನು ನಾನು ತಪ್ಪಾಗಿ ಅರ್ಥೈಸಿಕೊಂಡು ಒಮ್ಮೆ ನನ್ನ ಅಪ್ಪ, ಅಮ್ಮನಿಗೆ "ನೀವು ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ ಹಚ್ಚುತ್ತೀರಾ" ಎಂದು ನೋವಾಗುವಂತೆ ಮಾತನಾಡಿದ್ದೆ. ಇದು ಒಂದು ಉದಾಹರಣೆ ಅಷ್ಟೇ. ಆ ರೀತಿ ನಾನು ಬಹಳ ಸಲ ನೋವು ಕೊಟ್ಟಿದ್ದೇನೆ. ನನ್ನ ಅಪ್ಪ, ಅಮ್ಮ ನನ್ನನ್ನು ಎಷ್ಟು ಪ್ರೀತಿಸುತ್ತಾರೆ ಅಂತ ನನಗೆ ಈಗ ಅರ್ಥವಾಗಿದೆ.

ಚಿಕ್ಕಂದಿನಿಂದಲೂ ಮನೆಯಿಂದ ಹೊರಗೆ ನನ್ನ ಒಡನಾಟ ಜಾಸ್ತಿ. ನಾನು ಪಿಯುಸಿ ಮತ್ತು ಡಿಗ್ರಿಯನ್ನು ಹಾಸ್ಟಲ್‌ನಲ್ಲಿ ಇದ್ದುಕೊಂಡು ಓದಿದ್ದೆ. ನಂತರ ನಾನು ಬೆಂಗಳೂರಿನಲ್ಲಿ ಕೆಲಸಕ್ಕೆ ಸೇರಿದೆ. ನನ್ನ ಅಣ್ಣ ಒಳ್ಳೆಯ ಉದ್ಯೋಗದಲ್ಲಿ ಇದ್ದ. ಅಪ್ಪ, ಅಮ್ಮನನ್ನು ಬೆಂಗಳೂರಿಗೆ ಕರೆಸಿಕೊಳ್ಳಲು ನಿರ್ಧರಿಸಿದ. ನನಗೆ ಸ್ನೇಹಿತರ ಜೊತೆ ಇರಬೇಕೆಂಬ ಆಸೆ. ನಮ್ಮ ಅಪ್ಪ ಅಮ್ಮನಿಗೆ ಮಕ್ಕಳ ಜೊತೆ ಇರಬೇಕೆಂಬ ಆಸೆ. ನಾನು ಆಗ ಅಪ್ಪ, ಅಮ್ಮನಿಗೆ "ಬೆಂಗಳೂರಿಗೆ ಬರಬೇಡಿ, ನಾನು ಸ್ನೇಹಿತರ ಜೊತೆ ಇರುತ್ತೇನೆ" ಎಂದು ಉಪವಾಸ ಸತ್ಯಾಗ್ರಹ ಮಾಡಿ ಹೆದರಿಸಿದ್ದೆ. ಆದರೆ ಚಂದ್ರಶೇಖರ ಭಾರತೀ ಸ್ವಾಮಿಗಳು ನನ್ನ ಜೀವನದಲ್ಲಿ ಬಂದಮೇಲೆ ನನ್ನ ನಡೆ ನುಡಿಯಲ್ಲಿ ಹಲವಾರು ಬದಲಾವಣೆಗಳಾದವು. ಮೊದಲನೆಯದಾಗಿ ನಾನು ನನ್ನ ಅಪ್ಪ, ಅಮ್ಮನಲ್ಲಿ ದೇವರನ್ನು ಕಾಣಲು ಪ್ರಾರಂಭಿಸಿದೆ. ಎಲ್ಲಾ ಗಂಡಸರಲ್ಲೂ ನಮ್ಮ ಅಪ್ಪನನ್ನು, ಎಲ್ಲಾ ಹೆಂಗಸರಲ್ಲೂ ನಮ್ಮ ಅಮ್ಮನನ್ನು ಕಾಣಲು ಶುರುಮಾಡಿದೆ. ನನ್ನ ಪ್ರಕಾರ ಅಪ್ಪ ಅಮ್ಮನನ್ನು ಸಂತೋಷವಾಗಿ ಇರುವಂತೆ ನೋಡಿಕೊಳ್ಳುವುದೇ ಎಲ್ಲಾ ಮಕ್ಕಳ ಪ್ರಥಮ ಕರ್ತವ್ಯ.

ಮುಂಚೆ ಸಣ್ಣ ಪುಟ್ಟ ವಿಷಯಕ್ಕೂ ನಾನು ಬೇಜಾರಾಗುತ್ತಿದ್ದೆ. ಈಗ ಯಾರು ಏನೇ ಹೇಳಿದರು, ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ. ಮುಂಚೆ ಯಾರು ನನಗೆ ಸ್ವಲ್ಪ ಬೇಜಾರಾಗುವಂತೆ ನಡೆದುಕೊಂಡರೂ, ಪ್ರತೀಕಾರ ತೀರಿಸಿಕೊಳ್ಳದೆ ಬಿಡುತ್ತಿರಲಿಲ್ಲ. ಅಷ್ಟು ಹಠ ಇತ್ತು. ಈಗ ನನಗೆ ಯಾರ ಮೇಲೂ ಕೋಪ ಬರುವುದಿಲ್ಲ. ನನ್ನ

ಮನಸ್ಸಿನಲ್ಲಿ ಏನಾದರು ಕೆಟ್ಟ ಆಲೋಚನೆಗಳು ಬಂದರೆ ಗುರುಗಳೇ ಅದನ್ನು ಮಟ್ಟ ಹಾಕಿ ಮನಃಪರಿವರ್ತನೆ ಮಾಡುತ್ತಾರೆ ಮತ್ತು ನಾನು ತಪ್ಪು ಮಾಡದಂತೆ ತಡೆಹಿಡಿಯುತ್ತಾರೆ ಅರ್ಥಾತ್ ತಪ್ಪು ಮಾಡಲು ಮನಸ್ಸು ಬಾರದಿರುವಂತೆ ಮಾಡುತ್ತಾರೆ. ಒಂದು ವೇಳೆ ನನ್ನಲ್ಲೇನಾದರೂ ಒಳ್ಳೆಯ ಗುಣಗಳು ಇವೆ ಎಂದಾದರೆ ಅದು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ನೀಡಿದ ಭಿಕ್ಷೆ. ಒಳ್ಳೆಯ ಗುಣಗಳು ನನ್ನಲ್ಲಿ ಇವೆ ಎಂದುಕೊಳ್ಳುವುದು ಅಹಂಕಾರವಾದರೂ ನನ್ನ ಈ ಬದಲಾವಣೆಗೆ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳೇ ಕಾರಣ ಎಂಬುದು ಹೆಮ್ಮೆಯ ವಿಷಯ. ಮುಂದೊಂದು ದಿನ ಗುರುಗಳು ನನ್ನ ಈ ಅಹಂಕಾರವನ್ನು ಸಹ ಇಲ್ಲದಂತೆ ಮಾಡುತ್ತಾರೆ ಎನ್ನುವ ನಂಬಿಕೆ ಇದೆ.

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

## ❀ ಕೆಲವು ಲೀಲಾಮೃತಗಳು ❀

### ೧.

ಒಮ್ಮೆ ಪುದುಕ್ಕೋಟ್ಟೈಯ "ಶ್ರೀ ಭುವನೇಶ್ವರೀ" ಪೀಠದ ಗುರುಗಳಾದ ಸ್ವಾಮಿ ಶಾಂತಾನಂದರು ಅವರ ಗುರುಗಳಾದ "ಶ್ರೀ ಸ್ವಯಂಪ್ರಕಾಶಾನಂದ"ರ ಅನುಜ್ಞೆಯಂತೆ "ಶ್ರೀ ವಿದ್ಯಾ ಪುರಶ್ಚರಣೆ" ಯನ್ನು ನಡೆಸಲೆಂದು ಕಾಂಚೀಪುರಕ್ಕೆ ಬಂದರು. ನಂತರ ಮಹಾ ವಿದ್ವಾಂಸರೂ, ಶ್ರೀ ವಿದ್ಯಾ ಉಪಾಸಕರೂ, ಮಂತ್ರ ಸಿದ್ಧರೂ ಆದ "ಬ್ರಹ್ಮಶ್ರೀ ಕಾಮಕೋಟಿ ಶಾಸ್ತ್ರಿ" ಗಳವರ ಗೃಹದಲ್ಲಿ ತಮ್ಮ ಭಿಕ್ಷೆಯನ್ನು ಸ್ವೀಕರಿಸಿದರು. ಆಗ ಒಂದು ಘಟನೆಯನ್ನು ಶ್ರೀ ಶಾಸ್ತ್ರಿಗಳಿಗೆ ವಿವರಿಸಿದರು "ಕಾಮಕೋಟಿ, ನಾನು ನನ್ನ ಯೋಗ ಶಕ್ತಿಯಿಂದ, ವರ್ತಮಾನದಲ್ಲಿ ಯಾರಾದರೂ ಆತ್ಮ ಸಾಕ್ಷಾತ್ಕಾರ ಹೊಂದಿದ ಮಹಾಮಹಿಮರು ಇದ್ದಾರೆಯೇ ಎಂದು ಕಾಣಲು ಪ್ರಯತ್ನಿಸುತ್ತಿದ್ದೆ. ಆಗ ತಾಯಿ ಭುವನೇಶ್ವರಿಯು ನನ್ನನ್ನು ಶೃಂಗೇರಿಯ ಜಗದ್ಗುರು ಶ್ರೀ ಚಂದಶೇಖರ ಭಾರತೀ ಮಹಾಸ್ವಾಮಿಗಳವರ ಕಡೆಗೆ ನನ್ನ ಅಂತರ್ಯದಲ್ಲೇ ಮಾರ್ಗದರ್ಶಿಸಿದಳು. ಅವರ

ಆತ್ಮಸಾಕ್ಷಾತ್ಕಾರವನ್ನು ಸ್ವತಃ ಪರೀಕ್ಷಿಸಲೆಂದು ನಾನು ಶೃಂಗೇರಿಗೆ ಹೋದೆ. ಶ್ರೀ ಶಾರದಾಂಬಾ ದೇವಾಲಯದ ಆವರಣದಲ್ಲಿ ಕುಳಿತೆ. ಸತತ ಮೂರು ದಿನಗಳಾದರು ನನ್ನನ್ನು ಯಾರೂ ಗಮನಿಸಲಿಲ್ಲ.

ಮೂರನೆಯ ದಿನ ಇನ್ನೇನು ಅಲ್ಲಿಂದ ಹೊರಡಬೇಕೆನ್ನುವಷ್ಟರಲ್ಲಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ಪರಿಚಾರಕರೊಬ್ಬರು ಬಂದು ನನ್ನಲ್ಲಿ "ಮಹಾಸ್ವಾಮಿಗಳು ನಿಮ್ಮನ್ನು ಕಾಣಬೇಕೆಂದಿದ್ದಾರೆ" ಎಂದು ತಿಳಿಸಿದರು. ಆಶ್ಚರ್ಯದಿಂದ ನಾನು ಅವರನ್ನು ಹಿಂಬಾಲಿಸುತ್ತ ಒಂದು ಕತ್ತಲೆ ಕೋಣೆಯನ್ನು ಪ್ರವೇಶಿಸಿದೆ. ಅದೊಂದು ಖಾಲಿಯ ಕೋಣೆಯಾಗಿದ್ದು, ಅದರ ಮಧ್ಯದಲ್ಲಿ ಕೃಶಕಾಯರಾಗಿದ್ದ ಯತಿಯೋರ್ವರು ವಿರಾಜಮಾನರಾಗಿದ್ದರು. ಅವರ ತೇಜಸ್ಸು ಸೂರ್ಯನನ್ನೇ ಮೀರಿಸುವಂತಿತ್ತು. ಅವರು ನನ್ನನ್ನು ದೃಷ್ಟಿಸಿ ನೋಡಿದರಷ್ಟೇ. ಅವರ ಆ ದೃಷ್ಟಿಯೇ ನನ್ನಲ್ಲಿ "ಶಕ್ತಿಪಾತ"ವನ್ನು ಪ್ರೇರೇಪಿಸಿತು. ಕೆಲವೇ ಕ್ಷಣಗಳಲ್ಲಿ ನಾನು ಸಮಾಧಿ ಸ್ಥಿತಿಯನ್ನು ತಲುಪಿದೆ.

ಅವರು ವರ್ತಮಾನದ ಜ್ಞಾನಿಗಳಲ್ಲಿ ಸರ್ವಶ್ರೇಷ್ಠರು. "ಕೆಲವೇ ಮಾಸಗಳಲ್ಲಿ ಅವರು ತಮ್ಮ ದೇಹತ್ಯಾಗ ಮಾಡಲಿದ್ದಾರೆ. ಅದಕ್ಕೂ ಮುನ್ನ ಗುರುಗಳಲ್ಲಿ ಹೋಗಿ ಅವರ ದರ್ಶನ ಪಡೆ" ಎಂದು ಸ್ವಾಮಿ ಶ್ರೀ ಶಾಂತಾನಂದರು ಶ್ರೀ ಕಾಮಕೋಟಿ ಶಾಸ್ತ್ರಿಗಳಿಗೆ ಹೇಳಿದರು. ಮಹಾಮಹಿಮರು, ಜೀವನ್ಮುಕ್ತರು ಮಹಾತಪಸ್ವಿಗಳಾದ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ನಂತರ ಶ್ರೀ ಕಾಮಕೋಟಿ ಶಾಸ್ತ್ರಿಗಳಿಗೂ ಸಹ ತಮ್ಮ ದರ್ಶನ, ಕೃಪಾಶೀರ್ವಾದವನ್ನು ಕರುಣಿಸಿದರು.

## ೨.

ತಮಿಳುನಾಡಿನ ಸುಮಾರು ೫೦ ಜನ ಭಕ್ತರ ಗುಂಪೊಂದು ಕರ್ನಾಟಕದ ತೀರ್ಥಯಾತ್ರೆಗೆ ಹೊರಡುವ ಮುನ್ನ ಶ್ರೀ ಕಂಚೀ ಚಂದ್ರಶೇಖರ ಸರಸ್ವತೀ ಮಹಾಸ್ವಾಮಿಗಳವರ ದರ್ಶನವನ್ನು ಪಡೆಯಲು ಬಂದಿತು. ಅವರಿಂದ ಯಾತ್ರೆಯ ವಿವರವನ್ನು ತಿಳಿದ ಮಹಾಸ್ವಾಮಿಗಳು, ಮಂಗಳೂರಿನಿಂದ ಮೊದಲು ಶೃಂಗೇರಿಗೆ ಹೋಗಿ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳವರ ದರ್ಶನ ಹಾಗು ಪ್ರಸಾದಗಳನ್ನು ಪಡೆದು, ನಂತರವೇ ಮುಂದಿನ ಯಾತ್ರೆಯನ್ನು ಕೈಗೊಳ್ಳಬೇಕೆಂದು ಅವರಿಗೆ ಹೇಳಿದರು. ಯಾವುದೇ ಕಾರಣಕ್ಕೂ ಸೂರ್ಯಾಸ್ತವಾದ ನಂತರ ಶೃಂಗೇರಿಯನ್ನು ತಲುಪಬಾರದು ಎಂದು ನುಡಿದರು.

ಆ ರಾತ್ರಿ ಅವರೆಲ್ಲ ಮಂಗಳೂರನ್ನು ತಲುಪಿದರು. ಮಾರನೆಯ ದಿನ ಬೆಳಗ್ಗೆ ಆ ಗುಂಪಿನಲ್ಲೊಬ್ಬರು ಶೃಂಗೇರಿಗೆ ಹೋಗುವ ಮೊದಲು ತಲಕಾವೇರಿಗೆ ಹೋಗೋಣವೆಂದು ಒತ್ತಾಯಿಸಿದರು. ಬಹುತೇಕರು ಅದಕ್ಕೆ ಒಪ್ಪಿದರು. ನಂತರ ಮಂಗಳೂರಿನಿಂದ

ಸೀದಾ ತಲಕಾವೇರಿಗೆ ಹೋದರು. ಮಾರನೆಯ ದಿನ ತಲಕಾವೇರಿಯಿಂದ ಶೃಂಗೇರಿಗೆ ಪ್ರಯಾಣವನ್ನು ಆರಂಭಿಸಿದರು. ಅನೇಕ ವಿಘ್ನಗಳನ್ನು ಎದುರಿಸಿದ ಅವರು ರಾತ್ರಿ ೮ ಗಂಟೆಯಾದರೂ ಶೃಂಗೇರಿಯನ್ನು ತಲುಪಲು ಸಾಧ್ಯವಾಗಲಿಲ್ಲ.

ಬೆಟ್ಟದ ಕಣಿವೆಯಲ್ಲಿ ಎರಡೂ ಚಕ್ರಗಳು ಪಂಕ್ಚರ್ ಆಯಿತು. ನಂತರ ಅದನ್ನು ಬದಲಾಯಿಸಿ ಹೊರಟ ಮೇಲೆ ದಾರಿಯನ್ನು ತಪ್ಪಿ ೧೫ ಕಿಲೋಮೀಟರು, ವಿರುದ್ಧ ದಿಕ್ಕಿನಲ್ಲಿ ಅತಿಯಾಗಿ ಕ್ರಮಿಸುವಂತಾಯಿತು. ಇದನ್ನ ಅರಿತ ಚಾಲಕ ಬಸ್ಸನ್ನು ತಿರುಗಿಸಲು ಮುಂದಾದನು. ಅವನು ಬಲಕ್ಕೆ ಬಸ್ಸನ್ನು ತಿರುಗಿಸಲು ಹೊರಡುತ್ತಿದ್ದಂತೆಯೇ ಬಸ್ಸು ಕಣಿವೆಯಿಂದ ಜಾರಲು ಶುರುವಾಯಿತು. ಎಲ್ಲರೂ ಭಯಭೀತರಾಗಿ ಶ್ರೀ ಶಾರದಾಂಬೆಯನ್ನು ಪ್ರಾರ್ಥಿಸಲು, ಜಾರುತ್ತಿದ್ದ ಬಸ್ಸು ಇದ್ದಕ್ಕಿದ್ದಂತೆಯೇ ನಿಂತುಬಿಟ್ಟಿತು. ಯಾರೋ ಬಸ್ಸು ಹಿಡಿದು ನಿಲ್ಲಿಸಿದರೇನೋ ಎನ್ನುವಂತೆ ಭಾಸವಾಯಿತು ಅಲ್ಲಿದ್ದವರೆಲ್ಲರಿಗೂ.

ನಂತರ ಗಾಡಿಯನ್ನು ಯಾವುದೇ ತೊಂದರೆ ಇಲ್ಲದೆ ಓಡಿಸಿಕೊಂಡು ಮಧ್ಯರಾತ್ರಿ ವೇಳೆಗೆ ಶೃಂಗೇರಿ ತಲುಪಿದರು. ಅವರ ಬರುವಿಕೆಯನ್ನೇ ನಿರೀಕ್ಷಿಸುತ್ತಿದ್ದ ಒಬ್ಬ ವಿದ್ಯಾರ್ಥಿಯು ಅವರಿಗೆಲ್ಲ "ನೀವು ಕೈಕಾಲು ತೊಳೆದು ಊಟ ಮಾಡಿ, ಮಹಾಸ್ವಾಮಿಗಳು ನಿಮಗೆಲ್ಲಾ ಕಾಯುತ್ತಿದ್ದರು, ೫೪ ಜನರಿಗೆ ಮಠದಲ್ಲಿ ಅಡುಗೆ ಮಾಡಲು ತಿಳಿಸಿದರು" ಎಂದು ಹೇಳಿದನು. ಅವರಿಗೆಲ್ಲ ಪರಮಾಶ್ಚರ್ಯವಾಯಿತು. ಏಕೆಂದರೆ ತಾವು ಶೃಂಗೇರಿಗೆ ಬರುವ ವಿಷಯ ಶೃಂಗೇರಿಯಲ್ಲಿ ಯಾರಿಗೂ ಹೇಳಿರಲಿಲ್ಲ. ಶಾಸ್ತ್ರ ಗ್ರಂಥವನ್ನು ಓದುತ್ತಿದ್ದ ಗುರುಗಳು ಇದ್ದಕ್ಕಿದ್ದಂತೆಯೇ ಎದ್ದು ಜಪವನ್ನು ಮಾಡುತ್ತಾ ತಮ್ಮ ಕೈಗಳನ್ನು ಗೋಡೆಯ ಮೇಲೆ ಒತ್ತಿ ಇಟ್ಟರು. ನಂತರ "ಶ್ರೀ ಶಾರದಾಂಬಾ ದರ್ಶನಕ್ಕೆಂದು ಹೋರಟ ಚೆನ್ನೈನ ಭಕ್ತರ ಬಸ್ಸೊಂದು ಬ್ರೇಕ್ ಫೇಲ್ಯೂರ್ ಆಗಿ ನಿಯಂತ್ರಣ ತಪ್ಪಿ ಹೋಗಿತ್ತು. ಈಗ ಎಲ್ಲ ಕ್ಷೇಮವಾಯಿತು. ಅವರೆಲ್ಲ ಶೃಂಗೇರಿಗೆ ಬಂದಿಳಿಯುತ್ತಿದ್ದಾರೆ. ಬಿಸಿಯಾಗಿ ಅಡುಗೆಯನ್ನು ಮಾಡಿ ಅವರನ್ನು ಬರಮಾಡಿಕೊಳ್ಳಿ" ಎಂದು ಗುರುಗಳು ಹೇಳಿದ್ದನ್ನು ಆ ವಿದ್ಯಾರ್ಥಿಯು ಅವರಿಗೆಲ್ಲ ಹೇಳಿದನು.

ಮಾರನೆಯ ದಿನ ಅವರು ಗುರುಗಳ ದರ್ಶನಕ್ಕೆ ಹೋದಾಗ ಗುರುಗಳು "ಮಹಾತ್ಮರು ಹೇಳಿದುದನ್ನು ಅನುಸರಿಸಬೇಕು, ಅದನ್ನು ಬದಲಿಸಿದರೆ, ಈ ರೀತಿ ಎಲ್ಲವೂ ಬದಲಾಗುತ್ತದೆ" ಎಂದು ನಗುತ್ತ ಹೇಳಿದರು.

## ೩.

ಚಂದಶೇಖರ ಭಾರತೀ ಸ್ವಾಮಿಗಳು ವಿಜಯ ಯಾತ್ರೆಯ ಕಾಲದಲ್ಲಿ ಚೆಟ್ಟಿನಾಡಿನ ದೇವಕೋಟ್ಟೈಗೆ ದಯಮಾಡಿಸಿದಾಗ, ಅಲ್ಲಿ ನೀರಿನ ಅಭಾವ ತೀವ್ರವಾಗಿತ್ತು. ಸರಿಯಾಗಿ

ಮಳೆಯಾಗದೆ ಜನ ತುಂಬಾ ಕಷ್ಟಪಡುತ್ತಿದ್ದರು. ವ್ಯವಸ್ಥಾಪಕರು ಗುರುಗಳ ಬಿಡಾರವನ್ನು ಆ ಊರಿನಿಂದ ಮುಂದಿನ ಊರಿಗೆ ಬದಲಾಯಿಸುವ ಯೋಚನೆಯಲ್ಲಿದ್ದರು. ಗುರುಗಳಿಗೆ ಜನರ ಕಷ್ಟದ ಅರಿವಾಯಿತು. ಅವರು ಕೂಡಲೇ ಶ್ರೀಮಠದ ಪಂಡಿತರಿಂದ ಶ್ರೀಮನ್ಮಹಾಭಾರತದ ವಿರಾಟ ಪರ್ವದ ಪಾರಾಯಣಕ್ಕೆ ಏರ್ಪಾಟು ಮಾಡಿದರು. ತಾವೇ ಸ್ವತಃ ವರುಣ ಮಂತ್ರವನ್ನು ಜಪಿಸಲಾರಂಭಿಸಿದರು. ಅದೇ ದಿನ ಮಧ್ಯಾಹ್ನ ಆಕಾಶದಲ್ಲಿ ಕಾರ್ಮೋಡಗಳು ಕಾಣಿಸಿಕೊಂಡವು. ಸ್ವಲ್ಪ ಸಮಯದಲ್ಲೇ ಧಾರಾಕಾರವಾಗಿ ಮಳೆಯು ಸುರಿಯಲಾರಂಭಿಸಿತು.

ಎಡೆಬಿಡದೆ ಸತತ ನಾಲ್ಕು ಘಂಟೆಗಳ ಕಾಲ ಕುಂಭದ್ರೋಣ ಮಳೆ ಸುರಿದು ಕೆರೆ, ಕೋಡಿಗಳೆಲ್ಲ ತುಂಬಿ ಹರಿದವು. ಆಗ ವ್ಯವಸ್ಥಾಪಕರು ಗುರುಗಳ ಸನ್ನಿಧಿಗೆ "ಮಳೆ ಸಾಕು ಸಾಕು" ಎನ್ನುತ್ತಾ ಓಡೋಡಿ ಬಂದರು. ಗುರುಗಳು ವಿರಾಟಪರ್ವದ ಪಾರಾಯಣವನ್ನು ನಿಲ್ಲಿಸಿ ಕರ್ಪೂರದ ಆರತಿ ಮಾಡಲು ಹೇಳಿದರು. ಆರತಿ ಮಾಡಿದ ತಕ್ಷಣವೇ ಮಳೆ ನಿಂತಿತು.

ಈ ಘಟನೆಯಿಂದ ಜನರಿಗಾದ ಸಂತೋಷಕ್ಕೆ ಮಿತಿಯೇ ಇರಲಿಲ್ಲ. ಅವರು ಗುರುಗಳಲ್ಲಿ ಬಂದು ಭಕ್ತಿಯಿಂದ ತಮ್ಮ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಲ್ಲಿಸಿದರು. ಸಿದ್ಧ ಸಂಕಲ್ಪರಾಗಿದ್ದ ಗುರುಗಳು ಕೇವಲ ಸಂಕಲ್ಪದಿಂದಲೇ, ಇಚ್ಛಾಶಕ್ತಿಯಿಂದಲೇ ಮಳೆ ಸುರಿಯುವಂತೆ ಮಾಡಬಹುದಿತ್ತು. ಆದರೆ ಅವರು ಹಾಗೆ ಮಾಡದೆ ನಮ್ಮ ಸಂಪ್ರದಾಯಗಳ ಮಹತ್ವವನ್ನು, ಅದರಲ್ಲಿ ಅಡಗಿರುವ ನಿಗೂಢ ರಹಸ್ಯವನ್ನು ಜನತೆಯು ತಿಳಿಯಲು ಈ ಅವಕಾಶ ಕಲ್ಪಿಸಿದರು.

ಒಮ್ಮೆ ಭಕ್ತರೊಬ್ಬರು ಈ ಘಟನೆಯನ್ನು ಕುರಿತು ಗುರುಗಳಲ್ಲಿ ವಿಜ್ಞಾಪಿಸಿದಾಗ ಗುರುಗಳು "ಭಗವಾನ್ ವೇದವ್ಯಾಸರು ವರುಣ ಮಂತ್ರದ ಬೀಜಾಕ್ಷರಗಳನ್ನು ವಿರಾಟಪರ್ವದಲ್ಲಿ ಅಡಗಿಸಿದ್ದಾರೆ. ಭಕ್ತಿಯಿಂದ ಅದನ್ನು ಪಾರಾಯಣ ಮಾಡುವುದರಿಂದ ಮಳೆ ತರಿಸಬಹುದು" ಎಂದರು. ಎಲ್ಲರೂ ಮಹಾಸ್ವಾಮಿಗಳವರಿಗೆ ಅದ್ವಿತೀಯವಾದ ಶಾಸ್ತ್ರಪಾಂಡಿತ್ಯದ ಜೊತೆಗೆ ಮಂತ್ರಶಾಸ್ತ್ರಗಳ ನಿಗೂಢಾಂಶಗಳ ಬಗ್ಗೆಯೂ ಇರುವ ನೈಪುಣ್ಯಕ್ಕೆ ಆಶ್ಚರ್ಯಚಕಿತರಾಗಿ ತಲೆಬಾಗಿದರು.

## ೪.

ಚಂದ್ರಶೇಖರ ಭಾರತೀ ಸ್ವಾಮಿಗಳಲ್ಲಿ ಅತ್ಯಂತ ಭಕ್ತಿಯನ್ನು ಹೊಂದಿದ್ದ ಶಿಷ್ಯರೊಬ್ಬರು ಬಹಳ ದಿನಗಳಿಂದ ಶೃಂಗೇರಿಗೆ ಹೋಗಬೇಕೆಂದು ಅಪೇಕ್ಷಿಸಿದ್ದರು. ಗುರುದೇವರಿಂದ ಉಪದೇಶ ಪಡೆಯಬೇಕೆಂದು ಆಶಿಸಿದ್ದರು. ಒಮ್ಮೆ ಶೃಂಗೇರಿಗೆ ಹೋಗುವ ಅವಕಾಶವೂ

ಬಂತು. ಅದರಿಂದ ಆತ ಸಂತೋಷದಿಂದಲೂ, ಉತ್ಸಾಹದಿಂದಲೂ ಶೃಂಗೇರಿಗೆ ಬಂದರು.

ಶ್ರೀ ಶಾರದಾಂಬಾ ದೇವಿಯ ದರ್ಶನ ಮಾಡಿ ಆ ರಾತ್ರಿ ಮಠದ ವಸತಿಮಂದಿರದಲ್ಲಿ ತಂಗಿದರು. ಪ್ರಯಾಣದ ಆಯಾಸದಿಂದ ಬಹುಬೇಗ ನಿದ್ದೆ ಬಂದಿತು. ಶರೀರ ಪೂರ್ಣ ವಿಶ್ರಾಂತಿ ಸುಖವನ್ನು ಅನುಭವಿಸುತ್ತಿತ್ತು. ಮನಸ್ಸೆಲ್ಲಾ ಮಾರನೆಯ ದಿನ ಗುರುಗಳ ದರ್ಶನ ಪಡೆದು ಅವರಿಂದ ಉಪದೇಶವನ್ನು ಪಡೆಯಬೇಕೆನ್ನುವುದರ ಬಗ್ಗೆ ಆಲೋಚಿಸುತ್ತಿತ್ತು.

ಬೆಳಗಿನ ಜಾವದಲ್ಲಿ ಆತನಿಗೊಂದು ಸ್ವಪ್ನ! ಸ್ನಾನ, ಆಹ್ನಿಕಗಳನ್ನು ತೀರಿಸಿಕೊಂಡು ಹೊರಡಲಿದ್ದ ಆತನಿಗೆ ಗುರುದೇವರೇ ಸ್ವತಃ ಬಂದು ಹತ್ತಿರ ಕುಳಿತು ಬಾಗಿ ಕಿವಿಯಲ್ಲಿ ಮಂತ್ರೋಪದೇಶ ಮಾಡಿದ್ದಾರೆ. ತಕ್ಷಣವೇ ಆತನಿಗೆ ಎಚ್ಚರವಾಯಿತು. ಆಶ್ಚರ್ಯವೆಂದರೆ ಗುರುದೇವರಿತ್ತ ಮಂತ್ರ ಆತನ ನಾಲಿಗೆಯಲ್ಲಿ ನಲಿಯುತ್ತಿತ್ತು. ಭಕ್ತಿಯಿಂದ ಪುಳಕಿತನಾದ ಆತ ಸ್ನಾನಾದಿಗಳನ್ನು ಮುಗಿಸಿ ಶ್ರೀ ಶಾರದಾ ದರ್ಶನ ಮಾಡಿ ನರಸಿಂಹವನಕ್ಕೆ ಹೊರಟರು. ಗುರುಗಳ ದರ್ಶನ ಪಡೆದು ಸಾಷ್ಟಾಂಗವೆರಗಿದರು. ತಾನು ಬಂದ ಉದ್ದೇಶವನ್ನು ವಿವರಿಸುವಷ್ಟರಲ್ಲಿಯೇ ಗುರುದೇವರೇ ಹಸನ್ಮುಖದಿಂದ "ಆಗಲೇ ಆಯಿತಲ್ಲ, ಅದೇ ಉಪದೇಶವನ್ನು ಭಕ್ತಿಯಿಂದ ಜಪಿಸಿಕೊಂಡು ಹೋಗಿರಿ, ನಿಮಗೆ ಮಂಗಳವಾಗುತ್ತದೆ" ಎಂದು ನುಡಿದರು.

ಆತ ಅತ್ಯಂತ ಪುಲಕೋತ್ಕರ್ಷದಿಂದ ಉಕ್ಕಿ ಬಂದ ಹರ್ಷದಿಂದ ಕಂಠನಾಳವು ಬಿಗಿಯುತ್ತಿರಲು "ಅಪ್ಪಣೆ ಮಹಾಸ್ವಾಮಿ" ಎಂದು ಬಲು ಕಷ್ಟದಿಂದ ನುಡಿದು ಫಲಮಂತ್ರಾಕ್ಷತೆಯನ್ನು ಪಡೆದು ಹಿಂತಿರುಗಿದರು.

## ೫.

ಒಬ್ಬ ಜೈನ ವ್ಯಾಪಾರಿ ಒಂದು ಬಟ್ಟೆ ಅಂಗಡಿ ಇಟ್ಟುಕೊಂಡಿದ್ದ. ಆತನ ಬಳಿ ಕೆಲಸಮಾಡುತ್ತಿದ್ದ ಒಬ್ಬ ಕೆಲಸದಾಳು ತನ್ನ ಮಗಳ ಮದುವೆಗೆ ಹಣವನ್ನು ಬೇಡಿದ. ಆದರೆ ಆ ವ್ಯಾಪಾರಿಯು ಹಣ ಕೊಡಲು ನಿರಾಕರಿಸಿದ. ಕಡೆಯ ಪಕ್ಷ ಸೀರೆಯನ್ನಾದರೂ ನೀಡಿದರೆ ಉಪಕಾರವಾಗುತ್ತದೆಂದು ಪರಿಪರಿಯಾಗಿ ಬೇಡಿದ. ಆಗಲೂ ಆ ವ್ಯಾಪಾರಿಯ ಮನಸ್ಸು ಕರಗಲಿಲ್ಲ. ಅದನ್ನೂ ನಿರಾಕರಿಸಿ ವಾಪಸ್ಸು ಕಳುಹಿಸಿದ.

ಆತನು ತನ್ನ ಅಂಗಡಿಯನ್ನು ಮುಚ್ಚಿ ಮನೆಗೆ ಹೋದನು. ಅಂದು ರಾತ್ರಿ ಆತನಿಗೆ ಒಂದು ಕನಸು ಬಿತ್ತು. ಆ ಕನಸಿನಲ್ಲಿ ಒಬ್ಬ ಸಂನ್ಯಾಸಿಯು ಬಂದು ಅವನಿಗೆ "ನೀನು ಇಂದು ನಿನ್ನ ಕೆಲಸದಾಳಿಗೆ ಸಹಾಯ ಮಾಡದೆ ಕಳುಹಿಸಿದ್ದು ಸರಿಯಲ್ಲ. ನೀನು ದುಡಿದಿದ್ದರಲ್ಲಿ ಅವಶ್ಯಕತೆಗೆ ಬೇಕಾಗುವ ಹಣವನ್ನು ಬಿಟ್ಟು ಮಿಕ್ಕ ಹಣವನ್ನು ಬಡವರಿಗೆ ದಾನ ಮಾಡಬೇಕು.

ನಿನ್ನ ಅಂಗಡಿಯ ಕೆಲಸದಾಳು ಈಗ ನಿನ್ನ ಅಂಗಡಿಯಲ್ಲಿ ಕಳ್ಳತನ ಮಾಡುತ್ತಿದ್ದಾನೆ. ಅವನು ಈ ಹೀನ ಕೃತ್ಯವೆಸಗಲು ನೀನೇ ಕಾರಣ, ಈಗಲೇ ನೀನು ನಿನ್ನ ಅಂಗಡಿಗೆ ಹೋಗಿ ಅವನು ಕೇಳಿದ್ದನ್ನು ಕೊಡು" ಎಂದರು. ನಂತರ ಆ ವ್ಯಾಪಾರಿಗೆ ಎಚ್ಚರವಾಯಿತು. ಅದು ಕನಸೇ ಆದರೂ ಆ ವ್ಯಾಪಾರಿಗೆ ಸ್ವಲ್ಪ ಭಯವಾಯಿತು. ಏನಾದರೂ ಆಗಲಿ ಒಮ್ಮೆ ಅಂಗಡಿಗೆ ಹೋಗಿ ನೋಡಿ ಬರೋಣವೆಂದು ಅಂಗಡಿಗೆ ಹೊರಟನು.

ಅಂಗಡಿಗೆ ಹೋದಾಗ ಅವನಿಗೆ ಆಶ್ಚರ್ಯ ಕಾದಿತ್ತು. ಅವನ ಕೆಲಸದ ಆಳು ಅಂಗಡಿಯಲ್ಲಿ ಕಳ್ಳತನ ಮಾಡುತ್ತಿದ್ದನು. ಆದರೆ ಆ ಸಂನ್ಯಾಸಿಯ ದರ್ಶನದಿಂದ ತನ್ನ ದುರಾಸೆ ಸಂಪೂರ್ಣವಾಗಿ ನಶಿಸಿದ್ದರಿಂದ ಆ ವ್ಯಾಪಾರಿಯು ಸ್ವಲ್ಪವೂ ಕೋಪಗೊಳ್ಳದೆ ತನ್ನ ಕೆಲಸದಾಳಿಗೆ ಹಣ ಮತ್ತು ಸೀರೆಯನ್ನು ನೀಡಿ ಆತನ ಮಗಳ ಮದುವೆಗೆ ಶುಭ ಕೋರಿ ತನ್ನ ಮನೆಗೆ ಹಿಂತಿರುಗಿದನು. ಆದರೆ ತನ್ನ ಕನಸಿನಲ್ಲಿ ಬಂದ ಆ ಸಂನ್ಯಾಸಿ ಯಾರೆಂಬುದು ಮಾತ್ರ ಆತನಿಗೆ ತಿಳಿಯಲಿಲ್ಲ. ಹೀಗೆ ಕೆಲವು ದಿನಗಳು ಕಳೆದವು. ಒಂದು ದಿನ ಬೆಳಗ್ಗೆ ಅವನಿಗೆ ಅಚ್ಚರಿ ಕಾದಿತ್ತು. ಎಂದಿನಂತೆ ಅವನು ದಿನಪತ್ರಿಕೆ ಓದುವಾಗ ಅದರ ಮುಖಪುಟದಲ್ಲಿ ಬಂದಿದ್ದ ಸುದ್ದಿ ನೋಡಿ ದಿಗ್ಭ್ರಾಂತನಾದನು. ಆತನ ಕನಸಿನಲ್ಲಿ ಬಂದಿದ್ದ ಆ ಸಂನ್ಯಾಸಿಯ ಭಾವಚಿತ್ರದೊಂದಿಗೆ ಬಂದಿದ್ದ ಸುದ್ದಿ "ಶೃಂಗೇರಿ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳು ತುಂಗಾ ನದಿಯಲ್ಲಿ ತಮ್ಮ ದೇಹತ್ಯಾಗ ಮಾಡಿದರು" ಎಂಬುದಾಗಿತ್ತು.

ತನ್ನ ಕನಸಿನಲ್ಲಿ ದರ್ಶನ ಕೊಟ್ಟು ತನ್ನ ಕ್ರೂರ ಬುದ್ಧಿಯನ್ನು ನಾಶವಾಗುವಂತೆ ಮಾಡಿದ ಆ ಮಹಾನ್ ಸಂನ್ಯಾಸಿಯನ್ನು ಬದುಕಿದ್ದಾಗ ಒಮ್ಮೆಯೂ ನೋಡಲಾಗಲಿಲ್ಲವಲ್ಲಾ ಎಂದು ಬಹಳ ವ್ಯಸನಗೊಂಡನು. ಕಡೆಯ ಪಕ್ಷ ಅವರ ಸಮಾಧಿಯನ್ನಾದರೂ ದರ್ಶಿಸೋಣವೆಂದು ಆತ ಶೃಂಗೇರಿಗೆ ಬಂದನು. ಅಲ್ಲಿ ಮಹಾತಪಸ್ವಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಸಮಾಧಿಯ ಮುಂದೆ ನಿಂತು ಬಹಳ ಹೊತ್ತು ಕಣ್ಣೀರು ಸುರಿಸಿದನು. ಅದನ್ನು ಗಮನಿಸಿದ ಮಠದ ಸಿಬ್ಬಂದಿ ಯಾರು ನೀನು? ಏಕೆ ಅಳುತ್ತಿರುವೆ? ಎಂದು ಕೇಳಿದಾಗ, ಆ ವ್ಯಾಪಾರಿಯು ತನ್ನ ಕನಸಿನಲ್ಲಿ ಬಂದು ಸಂಪೂರ್ಣ ವ್ಯಕ್ತಿತ್ವವನ್ನೇ ಬದಲಿಸಿದ ಗುರುಗಳ ಉಪದೇಶವನ್ನು ವಿವರವಾಗಿ ಅವರಿಗೆ ಹೇಳಿದನು. ಹೀಗೆ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಕನಸಿನಲ್ಲಿಯೂ ಸಹ ಬಂದು ದುರ್ಮಾರ್ಗದಲ್ಲಿ ನಡೆಯುತ್ತಿದ್ದ ಎಷ್ಟೋ ಜನರನ್ನು ಸನ್ಮಾರ್ಗದೆಡೆಗೆ ನಡೆಯುವಂತೆ ಮಾಡಿದ್ದಾರೆ.

೬.

ಒಬ್ಬ ಶಿಷ್ಯ ಗುರುದೇವರ ಬಳಿ ಬಂದಾಗ ಯಾವುದಾದರೂ ಮಂತ್ರೋಪದೇಶವನ್ನು ಪಡೆಯಬೇಕೆಂಬ ಬಯಕೆ ಇಟ್ಟುಕೊಂಡಿದ್ದನು. ಅದರಂತೆ ಗುರುಗಳ ದರ್ಶನಕ್ಕೆ ಬಂದಾಗ

ಗುರುಗಳ ಬಳಿ "ಯಾವುದಾದರೂ ಮಂತ್ರವನ್ನು ಉಪದೇಶಿಸಿದರೆ ಕೃತಾರ್ಥನಾಗುತ್ತೇನೆ" ಎಂದು ಬಿನ್ನವಿಸಿಕೊಂಡನು. ತ್ರಿಕಾಲ ಜ್ಞಾನಿಗಳಾಗಿದ್ದ ಗುರುಗಳಿಗೆ ಆ ವ್ಯಕ್ತಿಯ ಪೂರ್ವಾಪರ ತಿಳಿದು ಹೋಗಿತ್ತು.

ಗುರುಗಳು: ಮಾತೃದೇವೋಭವ ಎನ್ನುವ ವೇದವಾಕ್ಯ ಕೇಳಿದ್ದೀರೋ?

ಶಿಷ್ಯ: ಕೇಳಿದ್ದೇನೆ

ಗುರುಗಳು: ಪಿತೃದೇವೋಭವ ಎನ್ನುವುದನ್ನು ಕೇಳಿದ್ದೀರೋ?

ಶಿಷ್ಯ: ಕೇಳಿದ್ದೇನೆ

ಗುರುಗಳು: ಮೊದಲು ಅವೆರಡನ್ನು ಪಾಲಿಸಿ. ನೀವು ನಿಮ್ಮ ತಂದೆ-ತಾಯಿಗಳನ್ನು ಈ ಇಳಿವಯಸ್ಸಿನಲ್ಲಿ ದೂರಮಾಡಿ ನಮ್ಮ ಬಳಿ ಮಂತ್ರೋಪದೇಶ ಪಡೆಯಲು ಬಂದಿದ್ದೀರಿ. ಮೊದಲು ಅವರನ್ನು ಮನೆಗೆ ಕರೆಸಿ ಚೆನ್ನಾಗಿ ನೋಡಿಕೊಳ್ಳಿ. ಮೊದಲು ಮಾತೃದೇವೋಭವ, ಪಿತೃದೇವೋಭವ, ನಂತರ ಆಚಾರ್ಯದೇವೋಭವ. ಮೊದಲೆರಡನ್ನು ಪಾಲಿಸಿ ನಂತರ ನಮ್ಮ ಬಳಿ ಬನ್ನಿ, ಆಗ ಮಂತ್ರೋಪದೇಶ ಮಾಡುತ್ತೇವೆ.

ಶಿಷ್ಯ: ಸ್ವಾಮಿಗಳೇ ಈಗ ನನ್ನ ತಪ್ಪಿನ ಅರಿವಾಗಿದೆ. ಇನ್ನು ಮುಂದೆ ನನ್ನ ತಂದೆ, ತಾಯಿಯ ಜೊತೆಯಲ್ಲೇ ಇದ್ದು, ಅವರನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆ. ಮಾತೃದೇವೋಭವ, ಪಿತೃದೇವೋಭವ ಎಂಬ ಮೊದಲೆರಡನ್ನು ಪಾಲಿಸಿ ನಂತರ ನಿಮ್ಮ ಬಳಿ ಮಂತ್ರೋಪದೇಶಕ್ಕೆ ಬರುತ್ತೇನೆ.

ಹೀಗೆ ಗುರುಗಳು ತಮ್ಮ ಹಿತನುಡಿಯಿಂದಲೇ ಎಲ್ಲರನ್ನೂ ತಿದ್ದುತ್ತಿದ್ದರು.

## ೭.

ಮಂತ್ರೇಶ್ವರ ಶರ್ಮ ಎಂಬುವವರ ಪತ್ನಿಯವರಿಗೆ ತೀವ್ರ ಖಾಯಿಲೆಯಾಗಿತ್ತು. ಆಕೆ ಉಳಿಯಲಾರರೆಂದು ಮನೆಯಲ್ಲಿ ನಿರಾಶೆಯ ವಾತಾವರಣ ಕವಿದಿತ್ತು. ಅಂತಹ ಸಮಯದಲ್ಲಿ ಶೃಂಗೇರಿಗೆ ಬಂದು ಗುರುದೇವರಲ್ಲಿ ಬಿನ್ನಹ ಮಾಡಿಕೊಂಡು ಪರಿಹಾರವನ್ನು ಬೇಡಲು ಶರ್ಮಾರವರಿಗೆ ಅವಕಾಶ ಇರಲಿಲ್ಲ. ಮನದಲ್ಲಿಯೇ ಗುರುದೇವರನ್ನು ಬೇಡಿ, ಕಷ್ಟದಿಂದ ಪಾರುಮಾಡುವಂತೆ ಬೇಡಿದರು ಶರ್ಮ. ಆಗ ಗುರುದೇವರು ಅಂತರ್ಮುಖರಾಗಿಬಿಟ್ಟಿದ್ದು ಸಮಾಧಿಯಲ್ಲಿದ್ದರು.

ಶರ್ಮರ ಪ್ರಾರ್ಥನೆ (ಆಗ ಅವರು ಶೃಂಗೇರಿಯಿಂದ ೫೦೦ ಮೈಲಿ ದೂರದಲ್ಲಿದ್ದರು) ಗುರುದೇವರನ್ನು ಮುಟ್ಟಿತು. ಅವರು ಕೂಡಲೇ ಬಹಿರ್ಮುಖರಾಗಿ ಮಠದ ಸಿಬ್ಬಂದಿಯನ್ನು ಕರೆಸಿದರು. ಶರ್ಮರ ಹೆಂಡತಿ ಗುಣಮುಖರಾಗುವರೆಂದು ಅವರು

ಹೆದರಬೇಕಾಗಿಲ್ಲವೆಂದೂ ತಿಳಿಸಿ, ಅದೇ ರೀತಿ ಶರ್ಮರಿಗೆ ತಂತಿ ವರ್ತಮಾನ ಕಳಿಸುವಂತೆ ಆಜ್ಞೆ ನೀಡಿದರು. ಗುರುಗಳ ಆಜ್ಞೆಯಂತೆ ಶರ್ಮರಿಗೆ ತಂತಿ ಕಳುಹಿಸಲ್ಪಟ್ಟಿತು. ತಂತಿ ವರ್ತಮಾನ ಬಂದು ಶರ್ಮರ ಪ್ರಾರ್ಥನೆ ನೆರವೇರಿ ಅವರ ಪತ್ನಿಯ ಖಾಯಿಲೆಯೂ ಗುಣವಾಯಿತು.

ಹೀಗೆ ಭಕ್ತಿಯಿಂದ ಮನಸ್ಸಿನಲ್ಲಿಯೇ ಧ್ಯಾನ ಮಾಡಿದರೂ ಸಾಕಾಗಿತ್ತು, ಗುರುದೇವರ ಅನುಗ್ರಹ, ಆಶೀರ್ವಾದ ಪಡೆಯಲು. ಇದ್ದಲ್ಲೇ ಅವರನ್ನು ಸ್ಮರಿಸಿ ಕಷ್ಟ ಪರಿಹಾರ ಮಾಡಿಕೊಂಡಿದ್ದರು ಪಂಡಿತ ಶರ್ಮರು.

## ೮.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ದಕ್ಷಿಣ ದೇಶದಲ್ಲಿ ಸಂಚಾರದಲ್ಲಿದ್ದಾಗ ತಿನ್ನವೆಲ್ಲಿ ಜಿಲ್ಲೆಯ ಒಂದು ಗ್ರಾಮದಲ್ಲಿ ಮೇನೆಯಲ್ಲಿ ಕುಳಿತು ಬಿಜಯ ಮಾಡುತ್ತಿದ್ದರು. ಉತ್ಸವವು ನಿಧಾನಗತಿಯಲ್ಲಿ ಸಾಗುತ್ತಿತ್ತು.

ದಾರಿಯಲ್ಲಿ ಒಬ್ಬ ಸನ್ಯಾಸಿಯು ಬಂದು ನಮಸ್ಕರಿಸಿದನು. ಗುರುಗಳು ಮೇನೆಯನ್ನು ನಿಲ್ಲಿಸುವಂತೆ ಹೇಳಿ ಅವನನ್ನು ಕುರಿತು "ಇದೇನು ನಿನ್ನ ಅವತಾರ? ನೀನು __ ಅವರ ತಮ್ಮನಲ್ಲವೇ?" ಎಂದು ಪ್ರಶ್ನಿಸಿದರು. ಅವನು ಹೌದೆಂದು ತಲೆಯಾಡಿಸಿ, "ಸ್ವಾಮಿ ನಾನು ಸಂನ್ಯಾಸ ಸ್ವೀಕರಿಸಿಬಿಟ್ಟಿದ್ದೇನೆ" ಎಂದನು. ಗುರುಗಳಿಗೆ ಅವನ ನುಡಿ ಕೇಳಿ ಬೇಸರವಾಯಿತು. "ನೀನು ಈಗಲೇ ನಮ್ಮ ಬಿಡಾರಕ್ಕೆ ಬಾ" ಎಂದರು. ಆತನು ಸ್ವಲ್ಪ ಭಯದಿಂದಲೇ ಗುರುಗಳ ಬಿಡಾರಕ್ಕೆ ಬಂದನು.

ಗುರುಗಳು ಅವನನ್ನು ಬರಮಾಡಿಕೊಂಡು "ಸಂನ್ಯಾಸವೆಂದರೆ ಹುಡುಗಾಟವೆಂದು ಭಾವಿಸಿದ್ದೀಯೇನು? ಜ್ಞಾನ ವೈರಾಗ್ಯಗಳು ಪಕ್ವವಾಗಿರಬೇಕು. ಕಾಮ, ಕ್ರೋಧಗಳು ನಶಿಸಿರಬೇಕು. ಮನಸ್ಸು ಪರಮಾರ್ಥ ತತ್ವವನ್ನು ಅರಿಯಲು ಹಾತೊರೆಯುತ್ತಿರಬೇಕು. ಆಗ ಮಾತ್ರ ಸಂನ್ಯಾಸತ್ವಕ್ಕೆ ಯೋಗ್ಯತೆ ಬರುತ್ತದೆ. ನೀನು ಮನೆಯಲ್ಲಿ ಜಗಳವಾಡಿಕೊಂಡು, ಜನಿವಾರವನ್ನು ತೆಗೆದು ಕಾವಿಯುಟ್ಟರೆ ಸಂನ್ಯಾಸಿಯಾಗಿಬಿಟ್ಟೆನೆಂದು ತಿಳಿದಿದ್ದೀಯೇನು? ನೀನು ಸಂನ್ಯಾಸಿಯಾಗಿಲ್ಲ, ಭ್ರಷ್ಟನಾಗಿದ್ದೀಯ, ನಿನ್ನನ್ನು ನಂಬಿದ ಪತ್ನಿ ಮಕ್ಕಳ ಕೈಬಿಟ್ಟು ತಪ್ಪು ಮಾಡಿದ್ದೀಯ. ಇದರಿಂದ ನಿನಗೆ ಮೋಕ್ಷ ಸಿಕ್ಕುವುದೇನು? ಕರ್ತವ್ಯ ಭ್ರಷ್ಟತೆಯ ದೋಷ ನಿನಗೆ ಅಂಟಿಕೊಳ್ಳುತ್ತದೆ. ಹೋಗು ನಿಮ್ಮ ಪುರೋಹಿತರನ್ನ ಕಂಡು ಪ್ರಾಯಶ್ಚಿತ್ತವನ್ನು ಮಾಡಿಕೊ, ಜನಿವಾರವನ್ನು ಧರಿಸಿ, ಗೃಹಸ್ಥಾಶ್ರಮದ ಕರ್ತವ್ಯಗಳನ್ನು ಪಾಲಿಸು. ಕಾವಿಯುಡುಗೆಯನ್ನು ತೆಗೆದು ಹಾಕು" ಎಂದು ಬುದ್ಧಿವಾದವನ್ನು ಹೇಳಿದರು. ಆತನಿಗೆ ಪುನಃ ಯಜ್ಞೋಪವೀತ ಧಾರಣೆ ಮಾಡಿಸಲು ಅಪ್ಪಣೆಯಿತ್ತರು.

# ೯.

ಒಮ್ಮೆ ಗುರುದೇವರು ನೆರೆದಿದ್ದ ಭಕ್ತವೃಂದಕ್ಕೆ ತೀರ್ಥ ಪ್ರಸಾದವನ್ನು ಹಂಚುತ್ತಿದ್ದರು. ಅಲ್ಲಿಗೆ ತನ್ನ ಮಗಳನ್ನು ಕರೆದುಕೊಂಡು ಬಂದಿದ್ದ ಮಹಿಳೆಯೊಬ್ಬಳು, ಮಗುವಿನ ಕೊರಳಿಗೆ ಹಾಕಿದ್ದ ಚಿನ್ನದ ಸರವು ಕಳವಾಗಿದ್ದರಿಂದ ಕಂಗಾಲಾಗಿದ್ದಳು. ಸುತ್ತ ನೆರೆದಿದ್ದವರು ಆಕೆಯನ್ನು ಸಮಾಧಾನಪಡಿಸಿ ತೀರ್ಥವನ್ನು ಸ್ವೀಕರಿಸಿದ ನಂತರ ಹುಡುಕಬಹುದು ಎಂದು ಸಲಹೆ ನೀಡಿ ಸರತಿ ಸಾಲಿನಲ್ಲಿ ನಿಲ್ಲಲು ಹೇಳಿದರು. ಅಂತೆಯೇ ಆಕೆ ಸರದಿಯಲ್ಲಿ ತೀರ್ಥಕ್ಕಾಗಿ ಗುರುಗಳ ಮುಂದೆ ಕೈ ನೀಡಿದಾಗ, ಆಕೆಯನ್ನು ಪಕ್ಕಕ್ಕೆ ನಿಲ್ಲುವಂತೆ ಗುರುಗಳು ಸಂಜ್ಞೆ ಮಾಡಿದರು. ಅತ್ತ ಸರವೂ ಸಿಗದೇ, ಇತ್ತ ತೀರ್ಥವೂ ಸಿಗದೆಯಿದ್ದಿದ್ದರಿಂದ ಆಕೆಯ ದುಃಖ ಹೆಚ್ಚಾಗಿ ಏನೂ ಮಾಡಲು ತೋಚದೆ ಸುಮ್ಮನೆ ನಿಂತಳು. ಗುರುಗಳು ತೀರ್ಥ ವಿನಿಯೋಗವನ್ನು ಮುಂದುವರಿಸುತ್ತಾ, ಒಬ್ಬ ವಯಸ್ಸಾದ ಮಹಿಳೆಯ ಸರದಿ ಬಂದಾಗ ಮೆಲುದನಿಯಲ್ಲಿ

"ಅದನ್ನು ಕೊಟ್ಟುಬಿಡು" ಎಂದರು.

"ಏನನ್ನು?" ಆಕೆ ಕೇಳಿದಳು.

"ಏನನ್ನು ನೀನು ತೆಗೆದುಕೊಂಡಿದೆಯೋ ಅದನ್ನು" ಎಂದು ಗುರುಗಳು ಶಾಂತರಾಗಿಯೇ ಹೇಳಿದರು

"ನಾನೇನೂ ತೆಗೆದುಕೊಂಡಿಲ್ಲ" ಎಂದು ಆಕೆ ಹಠ ಹಿಡಿದಳು.

ಇದನ್ನು ಗಮನಿಸಿದ ಸುತ್ತಲಿನ ಇತರೆ ಮಹಿಳೆಯರು ಆಕೆಯನ್ನು ಹಿಡಿದುಕೊಂಡು ಬಲವಂತವಾಗಿ ಪರೀಕ್ಷಿಸಿದರು. ಕೊನೆಗೆ ಆಕೆಯ ಸೀರೆಯ ಸೆರಗಿನಲ್ಲಿ ಬಚ್ಚಿಟ್ಟಿದ್ದ ಚಿನ್ನದ ಸರವನ್ನು ತೆಗೆದುಕೊಂಡು ಗುರುಗಳ ಮುಂದಿರಿಸಿದರು. ಗುರುಗಳು, ಸರ ಕಳೆದುಕೊಂಡಿದ್ದ ಆ ಹೆಂಗಸನ್ನು ಕರೆದು ತೀರ್ಥವನ್ನು ಕೊಡುತ್ತಾ, "ಇದನ್ನು ತೆಗೆದುಕೋ, ಆದರೆ ಈ ದಿನ ಮಾಡಿದಂಥ ತಪ್ಪನ್ನು ಮುಂದೆ ಎಂದಿಗೂ ಮಾಡಬಾರದು" ಎಂದು ಬುದ್ಧಿವಾದವನ್ನು ಹೇಳಿದರು. ಆಕೆ "ನಾನು ಪಾಠ ಕಲಿತೆ. ಇನ್ನು ಮುಂದೆ ಈ ರೀತಿ ಮಾಡುವುದಿಲ್ಲ" ಎಂದು ಮಾತು ಕೊಟ್ಟಳು.

ಆಕೆಯ ಪತಿ ಸ್ಥಳೀಯ ಕಚೇರಿಯ ಗುಮಾಸ್ತರಾಗಿದ್ದರು. ಆಕೆ ಗುರುಗಳ ಬಿಡಾರಕ್ಕೆ ಹೊರಡುವ ಮುನ್ನ ತಾನು ಕಚೇರಿಗೆ ಹೋಗಬೇಕಾದ್ದರಿಂದ ಮೊದಲು ತನಗೆ ಭೋಜನವಿತ್ತು, ಆ ನಂತರ ಗುರುಗಳ ದರ್ಶನಕ್ಕೆ ಹೋಗುವಂತೆ ತಿಳಿಸಿದ. ಆದರೆ ಪೂಜೆಯನ್ನು ತಪ್ಪಿಸಿಕೊಳ್ಳಬೇಕಾಗುತ್ತದೆ ಎಂಬ ಆತಂಕದಿಂದ ಆಕೆ ಆತುರ

ಆತುರವಾಗಿ ಅಡುಗೆ ಮಾಡಿ, ಅದನ್ನು ಆತನಿಗೇ ಬಡಿಸಿಕೊಳ್ಳಲು ತಿಳಿಸಿ ಗುರುಗಳ ಬಿಡಾರಕ್ಕೆ ಓಡಿ ಬಂದಿದ್ದಳು. ಈ ಘಟನೆಯಿಂದ ಗುರುದೇವರು ನಿಜವಾದ ದೈವಭಕ್ತಿ ಕರ್ತವ್ಯವಿಹೀನತೆಯಿಂದ ಅಪೂರ್ಣವಾಗುವುದೆಂದು ತೋರಿಸಿಕೊಟ್ಟಿದ್ದರು.

## ೧೦.

ಒಬ್ಬ ದೊಡ್ಡ ಅಧಿಕಾರಿಯ ಮಗನಿಗೆ ಕೆಲವು ವರ್ಷಗಳಿಂದ ಮೂರ್ಛೆ ರೋಗ ಬರುತ್ತಿತ್ತು. ಎಲ್ಲಾ ರೀತಿಯ ವೈದ್ಯಕೀಯ ಚಿಕಿತ್ಸೆಯನ್ನೂ ಕೊಡಿಸಿಯಾಗಿತ್ತು. ಆದರೆ ಏನೂ ಪ್ರಯೋಜನವಾಗಿರಲಿಲ್ಲ. ಕೊನೆಗೆ ಆತ ಮಗನನ್ನು ಕರೆದುಕೊಂಡು ಗುರುಗಳ ಬಳಿಗೆ ಬಂದನು. ಗುರುಗಳು "ವಿಧಿ ಪ್ರಬಲವಾಗಿ ಇರುವಂತೆ ಕಾಣುತ್ತದೆ. ವಿಶೇಷ ಪೂಜೆಗಳು ಹಾಗು ಹೋಮಗಳನ್ನು ಮಾಡಿಸಬೇಕಾಗಿದೆ" ಎಂದರು. ಆತ ಇದಕ್ಕೆ ಒಪ್ಪಿ ಸೂಕ್ತರಾದ ಪುರೋಹಿತರಿಂದ ಗುರುಗಳ ಮಾರ್ಗದರ್ಶನದಲ್ಲಿ ಜಪ ಹೋಮಗಳನ್ನು ಪ್ರಾರಂಭಿಸಿದರು.

ಆದರೆ ಪೂಜಾದಿಗಳು ಮುಗಿದ ದಿನ ಸಂಜೆಯೇ ಮತ್ತೆ ಆ ಬಾಲಕನಿಗೆ ಮೂರ್ಛೆ ಬಂದಿತು. ಇದರಿಂದ ದುಃಖಿತರಾದ ತಂದೆ ಗುರುಗಳಲ್ಲಿ ಈ ವಿಷಯವನ್ನು ಅರಿಕೆ ಮಾಡಿಕೊಂಡರು. ಗುರುಗಳು "ನೀವು ಚಿಂತೆ ಪಡಬೇಕಾಗಿಲ್ಲ. ಬೆಳಗಿನ ವೇಳೆಗೆ ಹುಡುಗ ಸರಿಹೋಗುತ್ತಾನೆ" ಎಂದರು. ಆದರೆ ಅರ್ಧ ಘಂಟೆಯಲ್ಲಿ ಮತ್ತೊಮ್ಮೆ ಮೂರ್ಛೆ ಕಾಣಿಸಿಕೊಂಡಾಗ ಮತ್ತೆ ಆತ ಗುರುಗಳ ಬಳಿಗೆ ಓಡಿದನು. ಆಗಲೂ ಗುರುಗಳಿಂದ ಅದೇ ಉತ್ತರ ಬಂದಿತು. ನಂತರ ಆ ಬಾಲಕ ಪ್ರತಿ ಹತ್ತು ನಿಮಿಷಕ್ಕೂ ಮೂರ್ಛೆ ಹೋಗುತ್ತಿದ್ದ. ಹೀಗೆ ಸುಮಾರು ಇಪ್ಪತ್ತು ಬಾರಿ ಮೂರ್ಛೆ ರೋಗವು ಆ ಬಾಲಕನನ್ನು ಪೀಡಿಸಿತು. ನಂತರ ಬೆಳಗಿನ ಜಾವ ನಾಲ್ಕು ಘಂಟೆಯ ವೇಳೆಗೆ ಆ ಬಾಲಕ ಚೆನ್ನಾಗಿ ನಿದ್ದೆ ಮಾಡಿದನು.

ಬೆಳಗ್ಗೆ ಎದ್ದ ಮೇಲೆ ಅವನ ಮುಖದಲ್ಲಿ ಹೊಸ ಕಳೆಯು ಕಂಡಿತು. ತಂದೆ ಮಕ್ಕಳಿಬ್ಬರೂ ನದಿಯಲ್ಲಿ ಸ್ನಾನ ಮಾಡಿಕೊಂಡು ಗುರುಗಳ ಬಳಿಗೆ ತೆರಳಿದರು. ಗುರುಗಳು "ಇನ್ನು ಮೇಲೆ ಏನೂ ತೊಂದರೆ ಇರುವುದಿಲ್ಲ" ವೆಂದು ಹರಸಿದರು. ನಂತರ ಆ ಬಾಲಕನೆಂದೂ ಮೂರ್ಛೆ ರೋಗದಿಂದ ತೊಂದರೆ ಪಡಲಿಲ್ಲ. ಗುರುಗಳು ವಿಧಿಯು ಪ್ರಬಲವಾಗಿದ್ದರೂ, ಸೂಕ್ತ ರೀತಿಯಲ್ಲಿ ಉಪಶಾಂತಿಯನ್ನು ಮಾಡಿಸಿದಾಗ, ಮುಂದೆ ಅನುಭವಿಸಬೇಕಾದ ತೊಂದರೆ ನೋವುಗಳನ್ನೂ ತೀವ್ರ ರೀತಿಯಲ್ಲಿ ಒಂದೇ ದಿನದಲ್ಲಿ ಅನುಭವಿಸಿ ಮುಗಿಸಿ ಪಾರಾಗಬಹುದು ಎಂಬುದನ್ನು ತೋರಿಸಿಕೊಟ್ಟರು.

## ೧೧.

ಒಬ್ಬ ಮಹಿಳೆಯ ಮಗುವಿಗೆ ಚಿಕ್ಕಂದಿನಿಂದಲೂ ನೂರೆಂಟು ರೋಗ. ಇದೇ ಚಿಂತೆಯಲ್ಲಿದ್ದ ಆಕೆಗೆ ಯಾರೋ ಚಂದ್ರಶೇಖರ ಭಾರತೀ ಸ್ವಾಮಿಗಳ ದರ್ಶನ ಮಾಡಿಸಿದರೆ ಸರಿಯಾಗುತ್ತದೆ ಎಂದು ಹೇಳಿದರು. ಅದೇ ರೀತಿ ಆಕೆ ತನ್ನ ಮಗನನ್ನು ಕರೆದುಕೊಂಡು ಗುರುಗಳು ಬರುವ ಜಾಗದಲ್ಲಿ ದರ್ಶನಕ್ಕಾಗಿ ಕಾಯುತ್ತ ನಿಂತಳು. ಕೆಲ ಸಮಯದ ನಂತರ ಗುರುಗಳು ಪರಿಚಾರಕರೊಡನೆ ನಡೆದು ಬರುತ್ತಿದ್ದರು. ಮಠದ ಸಿಬ್ಬಂದಿಗಳು ಜನರನ್ನು ದೂರ ಸರಿಯುವಂತೆ ಸೂಚಿಸಿ ಗುರುಗಳಿಗೆ ದಾರಿ ಮಾಡಿಕೊಡುತ್ತಿದ್ದರು. ಆದರೆ ತನ್ನ ಮಗನ ಆರೋಗ್ಯದ ವಿಷಯವನ್ನು ಗುರುಗಳ ಮುಂದೆ ಹೇಳಿಕೊಳ್ಳಲು ಬಂದಿದ್ದ ಆಕೆಗೆ ದೂರ ಹೋಗುವಂತೆ ಸೂಚಿಸಿದ್ದು ಆತಂಕಕ್ಕೆ ಈಡುಮಾಡಿತು. ತಾನು ದೂರ ಹೋದರೆ ಗುರುಗಳ ದರ್ಶನ ಸಹ ಸಿಗುವುದಿಲ್ಲ, ಇನ್ನು ಮಗನ ಆರೋಗ್ಯದ ಬಗ್ಗೆ ಗುರುಗಳಿಗೆ ಹೇಗೆ ಹೇಳುವುದು? ಇದೇ ಚಿಂತೆಯಲ್ಲಿ ಇದ್ದ ಆಕೆಗೆ ಇನ್ನೇನು ಗುರುಗಳು ತನ್ನ ಸಮೀಪದಲ್ಲೇ ಬರುತ್ತಿರುವಾಗ ಏನು ಮಾಡಬೇಕೆಂದು ತೋಚದೆ ಕಕ್ಕಾಬಿಕ್ಕಿಯಾಗಿದ್ದಳು. ಗುರುಗಳು ಆಕೆಯ ಸಮೀಪದಲ್ಲೇ ನಡೆದು ಬರುತ್ತಿದ್ದರು. ಆಕೆ ಬೇರೆ ದಾರಿಕಾಣದೆ ಆ ಬಾಲಕನನ್ನು ಗುರುಗಳ ಮುಂದೆ ಸಾಷ್ಟಾಂಗ ಮಲಗಿಸಿಬಿಟ್ಟಳು. ಗುರುಗಳು ಒಮ್ಮೆ ಆ ಬಾಲಕನನ್ನು ನೋಡಿದರು. ನಂತರ ಆಕೆಗೆ ಹೇಳಿದರು "ಈ ಬಾಲಕನಿಗೆ ಇಲ್ಲೇ ಉಪನಯನವನ್ನು ಮಾಡಿಸಿ, ಈತನ ಅರೋಗ್ಯ ಸುಧಾರಣೆಯಾಗುತ್ತದೆ" ಎಂದು.

ತಾನು ಏನನ್ನು ಕೇಳದೆ ಗುರುಗಳೇ ತನ್ನ ಮಗನ ಆರೋಗ್ಯದ ಬಗ್ಗೆ ಹೇಳಿದ್ದನ್ನು ಕೇಳಿ ಆಕೆಗೆ ಬಹಳ ಸಂತೋಷವಾಯಿತು ಮತ್ತು ಗುರುಗಳ ಬಗ್ಗೆ ಇದ್ದ ಭಕ್ತಿಯು ದುಪ್ಪಟ್ಟಾಯಿತು. ಗುರುಗಳ ಆಣತಿಯಂತೆಯೇ ಆ ಹುಡುಗನ ಉಪನಯನವನ್ನು ನೆರವೇರಿಸಿದಳು. ಅಲ್ಲಿಯವರೆಗೂ ಅನಾರೋಗ್ಯದಿಂದ ನರಳುತ್ತಿದ್ದ ಆ ಬಾಲಕ ಉಪನಯನವಾದ ನಂತರ ಸಂಪೂರ್ಣವಾಗಿ ಚೇತರಿಸಿಕೊಂಡು ಆರೋಗ್ಯವಂತನಾದ.

ಅಂತೂ ಆ ತಾಯಿ ಗುರುಗಳ ದರ್ಶನ ಮಾತ್ರದಿಂದಲೇ ತನ್ನ ಮಗನ ಅರೋಗ್ಯ ಸರಿಹೋಗುವಂತೆ ಮಾಡಿಕೊಂಡಳು. ಯಾರಿಗೆ ಏನು ಪರಿಹಾರ ಮಾಡಿದರೆ ಸರಿಹೋಗುತ್ತದೆ ಎಂದು ಗುರುಗಳಿಗೆ ತಿಳಿಯದೆ ಇರುತ್ತದೆಯೇ?

## ೧೨.

ಒಮ್ಮೆ ಗುರುಭಕ್ತರೊಬ್ಬರು ಗುರುಗಳ ದರ್ಶನಕ್ಕಾಗಿ ಬಂದು ತೀರ್ಥ ಪ್ರಸಾದಕ್ಕಾಗಿ ಸರತಿ ಸಾಲಿನಲ್ಲಿ ನಿಂತಿದ್ದರು. ಕಡು ಬಡತನದಿಂದ ಬಂದಿದ್ದ ಅವರು ಗುರುಗಳ ಅನುಗ್ರಹಕ್ಕಾಗಿ ಪರಿತಪಿಸುತ್ತಿದ್ದರು. ಗುರುಗಳು ತಮ್ಮ ಕಡೆ ದೃಷ್ಟಿ ಬೀರಿದರೆ ತಮ್ಮ

ಕಷ್ಟ ಪರಿಹಾರವಾಗಬಹುದು ಎಂಬ ಭರವಸೆಯಲ್ಲಿದ್ದರು. ಇದ್ದ ಒಂದೇ ಒಂದು ಪಂಚೆಯು ಹರಿದು ಹೋಗಿತ್ತು. ಅದನ್ನೇ ಹೊಲಿದುಕೊಂಡು ಗುರುಗಳ ದರ್ಶನಕ್ಕೆ ಬಂದಿದ್ದರು. ತೀರ್ಥ ಕೊಡುವಾಗ ಅದನ್ನು ಗಮನಿಸಿದ ಗುರುಗಳು "ಏಕೆ ಹರಿದಿರುವ ಪಂಚೆ ಹಾಕಿಕೊಂಡು ಬಂದಿದ್ದೀರಾ?" ಎಂದು ವಿಚಾರಿಸಿದರು. ಆದರೆ ಆತ ಏನನ್ನೂ ಹೇಳದೆ ತಲೆತಗ್ಗಿಸಿ ನಿಂತಿದ್ದ.

ಗುರುಗಳ ಅರಿವಿಗೆ ಬಾರದ ವಿಷಯ ಯಾವುದಿದೆ? ಆತನ ಬಡತನದ ಅರಿವಾಯಿತು. ಎಷ್ಟೇ ಆದರೂ ಗುರುವರ್ಯರು ಕರುಣಾ ಮೂರ್ತಿಗಳಲ್ಲವೇ? ಆತನಿಗೆ ಒಂದು ಮಂತ್ರೋಪದೇಶ ಮಾಡಿ, ಅದನ್ನು ಪ್ರತಿ ದಿವಸ ಹೇಳಿಕೊಳ್ಳುವಂತೆ ತಿಳಿಸಿ, "ಇದರಿಂದ ನಿಮ್ಮ ಕಷ್ಟ ಪರಿಹಾರವಾಗುತ್ತದೆ" ಎಂದರು. ಗುರುಗಳ ಬಗ್ಗೆ ಅತ್ಯಂತ ಭಕ್ತಿ ಇಟ್ಟುಕೊಂಡಿದ್ದ ಅವರು, ಗುರುಗಳು ಹೇಳಿದ್ದನ್ನು ಚಾಚೂ ತಪ್ಪದೆ ಪಾಲಿಸಿದರು. ಗುರುವರ್ಯರು ನುಡಿದಂತೆ ಅವರ ಕಷ್ಟಗಳೆಲ್ಲವೂ ಕಳೆಯಲಾರಂಭಿಸಿತು. ಉಡುವುದಕ್ಕೆ ಒಂದು ಪಂಚೆಯೂ ಸಹ ಇರದ ಪರಿಸ್ಥಿತಿಯಲ್ಲಿದ್ದ ಅವರು, ಗುರುವಾಜ್ಞೆ ಪಾಲಿಸಿದ ನಂತರ ಒಂದು ಬಟ್ಟೆ ಅಂಗಡಿಯನ್ನೇ ತೆರೆದರು. ಗುರುಗಳು ತಮ್ಮ ಅವತಾರವನ್ನು ಮುಗಿಸಿ ಹೊರಟ ದಿನ, ಆ ವ್ಯಕ್ತಿ ಪ್ರತಿಯೊಬ್ಬರಿಗೂ ಬಟ್ಟೆಯನ್ನು ದಾನವಾಗಿ ನೀಡಿದರು. ಅಂದಿನಿಂದಲೂ ಗುರುಗಳ ಪ್ರತಿ ಆರಾಧನೆಯಲ್ಲಿ ಅವರು ಬಟ್ಟೆಯನ್ನು ದಾನವಾಗಿ ನೀಡುವುದನ್ನು ರೂಡಿ ಇಟ್ಟುಕೊಂಡರು.

ಗುರುಗಳನ್ನು ನಂಬಿದವರಿಗೆ ಕಷ್ಟಗಳು ಉಂಟೆ? ಎಂದಿಗೂ ಸಾಧ್ಯವಿಲ್ಲ.

## ೧೩.

ಒಮ್ಮೆ ಗುರುವರ್ಯರು ತುಂಗಾ ನದಿಯಲ್ಲಿ ಸ್ನಾನ ಮಾಡುತ್ತಿದ್ದರು. ಇದ್ದಕ್ಕಿದ್ದಂತೆಯೇ ಹತ್ತಿರ ನಿಂತಿದ್ದ ಪರಿಚಾರಕನಿಗೆ ಕೇಳುವಂತೆ "ಅಮ್ಮನವರಿಗೂ ಅನ್ಯಾಯ ಮಾಡುತ್ತಿದ್ದಾರಲ್ಲಾ" ಎಂದರು. ಆ ಪರಿಚಾರಕನಿಗೇನೂ ಅರ್ಥವಾಗಲಿಲ್ಲ. ಸುಮ್ಮನೆ ಪ್ರಶ್ನಾರ್ಥಕವಾಗಿ ನಿಂತುಕೊಂಡನು. "ಈ ದಿನ ಶ್ರೀ ಶಾರದಮ್ಮನವರಿಗೆ ಪಂಚಾಮೃತಾಭಿಷೇಕವಲ್ಲವೇ? ಉಗ್ರಾಣದಲ್ಲಿ ಹಸುವಿನ ತುಪ್ಪಕ್ಕೆ ಬೇರೆ ತುಪ್ಪವನ್ನು ಬೆರಕೆ ಮಾಡುತ್ತಿದ್ದಾರೆ. ಹಾಗೆ ಮಾಡಬಾರದೆಂದು ಹೇಳಿ ಬಾ" ಎಂದು ಗುರುದೇವರು ಹೇಳಿದರು.

ಪರಿಚಾರಕನು ಕೂಡಲೇ ಹೊಳೆದಾಟಿ ಮಠದ ಉಗ್ರಾಣಕ್ಕೆ ಬಂದನು. ಅಲ್ಲಿ ನೌಕರನೊಬ್ಬನು ಅಭಿಷೇಕದ ಒಳ್ಳೆಯ ತುಪ್ಪಕ್ಕೆ ಅಂಗಡಿ ತುಪ್ಪವನ್ನು ಬೆರಕೆ ಮಾಡುತ್ತಿದ್ದದ್ದನ್ನು ಸ್ವತಃ ಕಂಡನು. ಪರಿಚಾರಕನು ಉಗ್ರಾಣಾಧಿಕಾರಿಗೆ ತಿಳಿಸಿ ಅಭಿಷೇಕಕ್ಕೆ ಒಳ್ಳೆಯ ತುಪ್ಪವನ್ನು

ಸಿದ್ಧಪಡಿಸಬೇಕೆಂಬ ಗುರುಗಳ ಆಜ್ಞೆಯನ್ನು ತಿಳಿಸಿದನು. ಉಗ್ರಾಣಾಧಿಕಾರಿಗಳು ನೌಕರನಿಗೆ ತರಾಟೆ ತೆಗೆದುಕೊಂಡರು. ಅವನಿಗೆ ಬುದ್ಧಿವಾದವನ್ನು ಹೇಳಿ ತಿದ್ದಿಕೊಳ್ಳುವಂತೆ ಕಠಿಣವಾಗಿ ನುಡಿದರು. ಆತನಿಗೆ ತಪ್ಪಿನ ಅರಿವಾಗಿ ತನ್ನ ನಡತೆಯನ್ನು ಸರಿಪಡಿಸಿಕೊಂಡನು.

## ೧೪.

ಹರಿಕಥಾ ವಿದ್ವಾಂಸರಾದ ಶ್ರೀ ಕೃಷ್ಣ ಭಾಗವತರು ಬೆಂಗಳೂರಿನಲ್ಲಿ ನೆಲೆಸಿದ್ದರು. ಒಂದು ದಿನ ಭಾಗವತರು ತಮ್ಮ ಪೆಟ್ಟಿಗೆಯಲ್ಲಿ ಏನನ್ನೋ ಹುಡುಕುತ್ತಿದ್ದರು. ಅಲ್ಲಿ ಅವರಿಗೆ ಶ್ರೀ ಗುರುವರ್ಯರಿಂದ ಅನುಗ್ರಹಿಸಲ್ಪಟ್ಟ ಹಸಿರು ಶಾಲು ಕಣ್ಣಿಗೆ ಬಿತ್ತು. ತುಂಬಾ ಹಳೆಯ ಶಾಲಾದ್ದರಿಂದ ಅದು ಜೀರ್ಣವಾಗಿ ಉಪಯೋಗಕ್ಕೆ ಬಾರದಂತಿತ್ತು. ಗುರುಗಳು ಕರುಣಿಸಿದ ಶಾಲಾದ್ದರಿಂದ ಅದನ್ನು ಉಪಯೋಗಿಸಲು ಆಗುತ್ತಿಲ್ಲವಲ್ಲ ಎಂದು ಅವರಿಗೆ ಬೇಸರವಾಯಿತು.

ಅದೇ ಸಂಜೆ ಅವರ ಸ್ನೇಹಿತರೊಬ್ಬರು ಭಾಗವತರ ಮನೆಗೆ ಬಂದರು. ತಮ್ಮ ಮಿತ್ರರೊಬ್ಬರು ಕಾರಿನಲ್ಲಿ ಶೃಂಗೇರಿಗೆ ಹೊರಟಿದ್ದಾರೆಂದೂ ಭಾಗವತರೂ ಬರಬೇಕೆಂದು ಕೇಳಿಕೊಂಡರು. ಬಹಳ ಒತ್ತಾಯ ಮಾಡಿದ ನಂತರ ಭಾಗವತರು ಶೃಂಗೇರಿಗೆ ಅವರ ಕಾರಿನಲ್ಲಿ ಬರಲು ಒಪ್ಪಿದರು. ಮಾರನೆಯ ದಿನ ಬೆಳಗ್ಗೆ ಕಾರಿನಲ್ಲಿ ಎಲ್ಲರೂ ಶೃಂಗೇರಿಗೆ ಹೊರಟರು.

ಶೃಂಗೇರಿಗೆ ಬಂದ ಮಾರನೆಯ ದಿವಸ ಸ್ನಾನಾದಿಗಳನ್ನು ಮುಗಿಸಿಕೊಂಡು ಶ್ರೀ ಶಾರದಾಂಬೆಯ ದರ್ಶನ ಪಡೆದು ಗುರುಗಳ ಸನ್ನಿಧಿಗೆ ಬಂದರು. ಗುರುಗಳ ದರ್ಶನ ಪಡೆದು ಅಂದೇ ಎಲ್ಲರೂ ಹೊರಡುವ ಯೋಚನೆಯಲ್ಲಿದ್ದರು. ಗುರುಗಳು ಎಲ್ಲರಿಗೂ, ಹೊರಡುವ ಮುನ್ನ ಬರಬೇಕೆಂದು ತಿಳಿಸಿದರು. ಗುರುಗಳ ಅಪ್ಪಣೆಯಂತೆ ಎಲ್ಲರೂ ಫಲ ಮಂತ್ರಾಕ್ಷತೆಗಾಗಿ ನೃಸಿಂಹವನದಲ್ಲಿದ್ದ ಗುರುಗಳ ಬಿಡಾರಕ್ಕೆ ಬಂದರು. ಎಲ್ಲರನ್ನೂ ಆಶೀರ್ವದಿಸಿ ಫಲ ಮಂತ್ರಾಕ್ಷತೆಯನ್ನು ಅನುಗ್ರಹಿಸಿದ ಗುರುವರ್ಯರು ಭಾಗವತರಿಗೆ ಫಲ ಮಂತ್ರಾಕ್ಷತೆಯನ್ನು ಕೊಟ್ಟು ಒಂದು ಶಾಲನ್ನೂ ಅನುಗ್ರಹಿಸಿದರು. ಆ ಶಾಲು ಹಿಂದೆ ಬಹಳ ವರ್ಷಗಳ ಕೆಳಗೆ ಕೊಟ್ಟಿದ್ದ ಶಾಲಿನಂತೆಯೇ ಹಸಿರು ಬಣ್ಣದ್ದಾಗಿತ್ತು. ಭಾಗವತರು ಕೃತಜ್ಞತಾ ಭಾವದಿಂದ ಕುಗ್ಗಿ ಹೋದರು.

## ೧೫.

ವಿಜಯಯಾತ್ರೆಯಲ್ಲಿದ್ದ ಶ್ರೀ ಗುರುವರ್ಯರು ಮಧುರೆಯ ಬಳಿಯಿದ್ದ ಉತ್ತಂಗುಡಿ ಎಂಬಲ್ಲಿ ಬಿಡಾರ ಮಾಡಿದ್ದರು. ಮಧುರೆ ನಗರದ ವಕೀಲರಾದ ಶ್ರೀ ವೆಂಕಟರಾಮ ಐಯ್ಯರ್ ರವರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ದರ್ಶನಕ್ಕೆ ಹೊರಡಲು

ಸಿದ್ಧರಾಗಿ ಮನೆಯಿಂದ ಹೊರಕ್ಕೆ ಬಂದರು. ಅಲ್ಲಿಯೇ ಇದ್ದ ಮಂತ್ರೇಶ್ವರ ಶರ್ಮಾರನ್ನು ಕಂಡು "ಶ್ರೀ ಗುರುಗಳ ದರ್ಶನ ಮಾಡಲು ನೀವು ಬರುವುದಿಲ್ಲವೇ?" ಎಂದು ಕೇಳಿದರು.

ಅದಕ್ಕೆ ಶರ್ಮರು "ನನಗೆ ಈ ಸಾಧು ಸಂನ್ಯಾಸಿಗಳಲ್ಲಿ ಸ್ವಲ್ಪವೂ ನಂಬಿಕೆಯಿಲ್ಲ, ನಾನು ಬರುವುದಿಲ್ಲ ಎಂದುಬಿಟ್ಟರು. ಇವರು ಎಲ್ಲರಂತೆ ಸಾಮಾನ್ಯ ಸಂನ್ಯಾಸಿಗಳಲ್ಲ, ತಾವು ಒಮ್ಮೆ ಬಂದು ನೋಡಿ ಎಂದು ಐಯ್ಯರ್ ರವರು ಕರೆದರು. ಅದಕ್ಕೂ ಶರ್ಮರು ಒಪ್ಪಲಿಲ್ಲ. ಆದರೆ ಐಯ್ಯರ್‌ರವರು ಅಷ್ಟಕ್ಕೇ ಬಿಡದೆ ಬಲವಂತ ಮಾಡಿದರು. ತಾವು ಒಬ್ಬರೇ ಹೊರಟಿರುವುದಾಗಿಯೂ, ಇಷ್ಟವಿಲ್ಲದಿದ್ದರೂ ಕಡೇ ಪಕ್ಷ ಸುಮ್ಮನೆ ಜೊತೆಗೆ ಬರುವಂತೆ ಬಲವಂತ ಪಡಿಸಿದರು. ಶರ್ಮರು ಕೆಲವು ಷರತ್ತುಗಳನ್ನು ಹಾಕಿದರು. ನಿಮ್ಮ ಹಾಗೆ ಈ ರೀತಿ ಪಂಚೆ ಶಲ್ಯದಲ್ಲಿ ಬರಲಾರೆ ಎಂದರು. ಐಯ್ಯರ್ ರವರು "ಆಗಲಿ" ಎಂದರು. “ಗುರುಗಳ ಮುಂದೆ ತಲೆಬಾಗುವುದಿಲ್ಲ” ಎಂದು ಮತ್ತೊಂದು ಷರತ್ತು ವಿಧಿಸಿದರು. ಅದಕ್ಕೂ ಅಯ್ಯರ್ ರವರು "ಆಗಲಿ" ಎಂದರು. ಹೀಗೆ ಹಲವು ಷರತ್ತುಗಳನ್ನು ವಿಧಿಸಿದ ನಂತರ ಶರ್ಮರು ಬರಲು ಒಪ್ಪಿದರು.

ಇಬ್ಬರೂ ಗುರುಗಳು ಇದ್ದ ಸಭಾಂಗಣಕ್ಕೆ ಬಂದರು. ಅನೇಕ ಜನ ಭಕ್ತರು ಗುರುದೇವರ ದರ್ಶನಕ್ಕಾಗಿ ಕಾದು ಕುಳಿತಿದ್ದರು. ಪಾಶ್ಚಾತ್ಯ ಉಡುಪಿನಲ್ಲಿದ್ದ ಶರ್ಮರು ಒಳಗೆ ಬಾರದೆ, ಬಾಗಿಲ ಹಿಂದೆಯೇ ನಿಂತು ತಮಾಷೆಯನ್ನು ನೋಡುತ್ತಿದ್ದರು. ಎಂತೆಂಥ ದೊಡ್ಡ ಅಧಿಕಾರಿಗಳು ಬಂದು ಈ ಸಂನ್ಯಾಸಿಯ ಕಾಲಿಗೆ ಬೀಳುತ್ತಾರಲ್ಲ ಎಂದು ಮನಸ್ಸಿನಲ್ಲಿಯೇ ಮರುಗಿದರು. ಶ್ರೀ ಗುರುವರ್ಯರು ಸಭಾಂಗಣವನ್ನು ಪ್ರವೇಶಿಸುತ್ತಿದ್ದಂತೆ, ಎಲ್ಲರೂ ಎದ್ದು ನಿಂತು ಸಾಷ್ಟಾಂಗ ಪ್ರಣಾಮ ಮಾಡಿದರು. ಬಾಗಿಲ ಹಿಂದೆ ಇದ್ದ ಶರ್ಮರಿಗೆ ಗುರುದೇವರ ಬೆನ್ನು ಭಾಗ ಮಾತ್ರವೇ ಕಾಣಿಸುತ್ತಿತ್ತು.

ಭಕ್ತಾದಿಗಳು ಒಬ್ಬೊಬ್ಬರಾಗಿ ಗುರುಗಳ ದರ್ಶನ ಪಡೆದು ಹಿಂತಿರುಗುತ್ತಿದ್ದರು. ಸಭಿಕರತ್ತ ಮುಖಮಾಡಿ ನಿಂತಿದ್ದ ಗುರುಗಳು ಒಮ್ಮೆ ಹಿಂದಕ್ಕೆ ತಿರುಗಿದರು. ಹಿಂದೆ ನಿಂತಿದ್ದವರು ಯಾರಾದರೂ ನಮಸ್ಕಾರವನ್ನು ಮಾಡಿದರೆ, ಅದನ್ನು ಸ್ವೀಕರಿಸಲು ಒಮ್ಮೆ ಹಿಂದೆ ತಿರುಗಿ ನೋಡುವುದು ಗುರುಗಳ ಸ್ವಭಾವವಾಗಿತ್ತು. ಆಗ ಅಲ್ಲಿಯೇ ಇದ್ದ ಶರ್ಮಾರನ್ನು ಗುರುಗಳು ಒಮ್ಮೆ ದೃಷ್ಟಿ ಇಟ್ಟು ನೋಡಿದರು ಅಷ್ಟೇ. ಕ್ಷಣಮಾತ್ರದಲ್ಲಿ ಶರ್ಮರಲ್ಲಿ ಇದ್ದ ಜಂಭ, ಪ್ರತಿಷ್ಠೆ, ಅಹಂಕಾರವೆಲ್ಲವೂ ತಮಗೇ ಅರಿಯದಂತೆ ಕರಗಿಹೋದವು. ಕಣ್ಣಿನಲ್ಲಿ ಧಾರಾಕಾರ ನೀರು ಸುರಿಯಲಾರಂಭಿಸಿತು. ಪಶ್ಚಾತ್ತಾಪದಿಂದ ಗುರುಗಳ ಪವಿತ್ರ ಚರಣಗಳಲ್ಲಿ ಶರಣಾದರು. ಗುರುದೇವರು ಶರ್ಮಾರನ್ನು ಮೃದುಧ್ವನಿಯಲ್ಲಿ ಏಳಲು ಹೇಳಿದರು. ಶರ್ಮರು ತಾವು ಮಾಡಿದ್ದ ತಪ್ಪನ್ನು ಕ್ಷಮಿಸುವಂತೆ ಗುರುಗಳಲ್ಲಿ ಕೇಳಿಕೊಂಡರು. ಗುರುಗಳು ಮಾರನೇ ದಿನ ತಮ್ಮನ್ನು ಮಧುರೆಯಲ್ಲಿ ಕಾಣಬೇಕೆಂದು ಅವರಿಗೆ ಹೇಳಿ ತಮ್ಮ ಬಿಡಾರಕ್ಕೆ ಹೊರಟರು.

ಆ ರಾತ್ರಿಯೆಲ್ಲಾ ಅಲ್ಲಿಯೇ ಕಳೆದ ಶರ್ಮರು ಬೆಳಗಿನ ಜಾವದಲ್ಲಿ ಮಧುರೆಗೆ ನಡೆದುಕೊಂಡೆ ಹೋದರು. ಬೆಳಗ್ಗೆ ಶುಚಿಯಾಗಿ ಎಷ್ಟೋ ದಿನಗಳ ಹಿಂದೆ ತೆಗೆದು ಹಾಕಿದ್ದ ಜನಿವಾರವನ್ನು ಮತ್ತೆ ಧರಿಸಿದರು. ಸಂಜೆ ಮಧುರೆಗೆ ಬಂದಾಗ ಸಂಪೂರ್ಣವಾಗಿ ಬದಲಾಗಿ ವೈದಿಕ ಸಂಪ್ರದಾಯದಂತೆ ಇದ್ದರು. ಗುರುಗಳ ಆಶೀರ್ವಾದ ಪಡೆದ ಶರ್ಮರು ಅನಂತರ ಗುರುಗಳ ಪರಮ ಶಿಷ್ಯರಾದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳಿಲ್ಲದೆ ನನಗೆ ದೈವವಿಲ್ಲ ಎನ್ನುವಷ್ಟರ ಮಟ್ಟಿಗೆ ಬದಲಾಗಿದ್ದರು. ಗುರುಗಳು ಕೇವಲ ದೃಷ್ಟಿಮಾತ್ರದಿಂದಲೇ ಶರ್ಮರನ್ನು ಸಂಪೂರ್ಣವಾಗಿ ಬದಲಾಯಿಸಿ ಧಾರ್ಮಿಕರಾಗುವಂತೆ ಮಾಡಿದ್ದರು.

## ೧೬.

ಪಂಡಿತ ಮಂತ್ರೇಶ್ವರ ಶರ್ಮರು ಗುರುಗಳಲ್ಲಿ ಅತ್ಯಂತ ಗಾಢವಾದ ಭಕ್ತಿಯನ್ನು ಹೊಂದಿದ್ದರು. ಭಾರತದ ರಾಷ್ಟ್ರಪತಿಗಳಾಗಿದ್ದ ಡಾ॥ ರಾಜೇಂದ್ರಪ್ರಸಾದರು ಗುರುದೇವರ ದರ್ಶನಕ್ಕೆ ಶೃಂಗೇರಿಗೆ ಬರುವವರಿದ್ದರು. ಅದಕ್ಕೆ ಮೂರು ದಿನಗಳ ಹಿಂದೆ ಶೃಂಗೇರಿಯಲ್ಲಿಯೇ ಇದ್ದ ಶರ್ಮರಿಗೆ ಜ್ವರ ಬಂದು ತುಂಬಾ ತೊಂದರೆ ಪಡುತ್ತಿದ್ದರು. ಆಗ ಶೃಂಗೇರಿಯಲ್ಲಿ ಸತತವಾದ ಮಳೆ ಬೇರೆ. ಮುಂಗಾರು ಮಳೆ ಎಡೆಬಿಡದೆ ಸುರಿಯುತ್ತಿತ್ತು. ಶರ್ಮರು ಗುರುದೇವರಲ್ಲಿ ತಮ್ಮ ಅನಾರೋಗ್ಯವನ್ನು ಅರಿಕೆ ಮಾಡಿಕೊಂಡರು.

ಗುರುವರ್ಯರು ಶರ್ಮರಿಗೆ ಒಂದು ಶ್ಲೋಕವನ್ನು ಉಪದೇಶಿಸಿ "ನೀವು ಈ ಶ್ಲೋಕವನ್ನು ಹೇಳಿಕೊಂಡು ಶ್ರೀ ವಿಭಾಂಡಕರ ಬೆಟ್ಟಕ್ಕೆ ಹತ್ತಿ ಹೋಗಿ ಶ್ರೀ ಮಲಹಾನಿಕರೇಶ್ವರನಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಬನ್ನಿ, ನಿಮ್ಮ ಜ್ವರವು ಹಾರಿ ಹೋಗುತ್ತದೆ" ಎಂದು ಅಪ್ಪಣೆ ಮಾಡಿದರು. ಎಡೆಬಿಡದೆ ಸುರಿಯುತ್ತಿದ್ದ ಮಳೆ, ಜ್ವರದಿಂದ ಶರ್ಮರ ಕೈಕಾಲುಗಳೆಲ್ಲ ಹಿಡಿದುಕೊಂಡು ಬಿಟ್ಟಿತ್ತು. ಬೆಟ್ಟ ಹತ್ತುವುದೇ ಬಹಳ ಕಷ್ಟಸಾಧ್ಯವಾಗಿತ್ತು. ಆದರೆ ಗುರುಗಳ ಮೇಲೆ ಅಪಾರ ಭಕ್ತಿ ಇಟ್ಟುಕೊಂಡಿದ್ದ ಶರ್ಮರು, ಅದ್ಯಾವುದನ್ನೂ ಲೆಕ್ಕಿಸದೆ ಗುರುಗಳ ಅಪ್ಪಣೆಯಂತೆ ಮಲ್ಲಪ್ಪನ ಬೆಟ್ಟದಲ್ಲಿರುವ ಶ್ರೀ ಮಲಹಾನಿಕರೇಶ್ವರ ದೇವಸ್ಥಾನಕ್ಕೆ ನಿಧಾನವಾಗಿ ಹತ್ತಿ ಹೋಗಿ ದೇವಸ್ಥಾನವನ್ನು ಪ್ರವೇಶಿಸಿ ದೇವರಿಗೆ ಪ್ರದಕ್ಷಿಣೆ ಹಾಕಿ ಸಾಷ್ಟಾಂಗ ಪ್ರಣಾಮ ಮಾಡಿದರು. ಮರುದಿನ ಬೆಳಗ್ಗೆ ಏಳುವ ವೇಳೆಗೆ ಜ್ವರವೂ ಮಾಯ, ನೋವೂ ಮಾಯವಾಗಿತ್ತು.

## ೧೭.

ಗುರುಗಳು ಅಂತರ್ಮುಖರಾಗಿದ್ದ ಸಂದರ್ಭದಲ್ಲಿ ಆಪ್ತ ಶಿಷ್ಯರೊಬ್ಬರು ತಮ್ಮ ತಮ್ಮನಿಗೆ

ತುಂಬಾ ಖಾಯಿಲೆಯೆಂದು ಗುರುವರ್ಯರ ಆಶೀರ್ವಾದ ರಕ್ಷೆ ಬೇಕೆಂದು ಬೇಡಿ ತಂತಿಯ ಮೂಲಕ ಪ್ರಾರ್ಥಿಸಿದ್ದರು. ಆ ತಂತಿಯನ್ನು ಅಂಚೆಯಾಳಿನಿಂದ ಸ್ವೀಕರಿಸಿದ ಮಠದ ಅಧಿಕಾರಿ ತಮ್ಮಲ್ಲೇ ಗೊಣಗಿಕೊಂಡರು, ಗುರುಗಳಿಗೆ ಬಾಹ್ಯದರಿವೇ ಇಲ್ಲದಿರುವಾಗ ಇವೆಲ್ಲ ಅವರಿಗೆ ಹೇಗೆ ತಿಳಿಯುತ್ತದೆಂದು!

ಸ್ವಲ್ಪ ಕಾಲದ ಬಳಿಕ ಗುರುಗಳು ಅಂತರ್ಮುಖಿಗಳಾಗಿದ್ದಾಗ ಇರುತ್ತಿದ್ದ ಸ್ಥಳಕ್ಕೆ ಅವರು ಹೋದರು, ಅಕಸ್ಮಾತ್ ಗುರುಗಳು ಬಹಿರ್ಮುಖಿಗಳಾಗಿದ್ದಲ್ಲಿ ತಂತಿ ವಿಷಯವನ್ನು ಬಿನ್ನವಿಸಿಕೊಳ್ಳಲೆಂದು. ಅದೃಷ್ಟವಶಾತ್ ಗುರುಗಳೇ ಕೇಳಿದರು: "ಅದೇನು ನಿಮ್ಮ ಕೈಯಲ್ಲಿ?"

"ಶ್ರೀಯುತರವರು ತಮ್ಮ ಅಣ್ಣನಿಗೆ ಕಾಯಿಲೆಯೆಂದು, ಆಶೀರ್ವದಿಸಬೇಕೆಂದು ಪ್ರಾರ್ಥಿಸಿಕೊಂಡಿದ್ದಾರೆ. ಈ ತಂತಿ ಸಮಾಚಾರ ತಮ್ಮನಿಂದ ಬಂದಿದೆ", ಎಂದರು ಅಧಿಕಾರಿ.

"ಏನಂದಿರಿ? ತಮ್ಮನಿಗೆ ಸೌಖ್ಯವಿಲ್ಲವೆಂದು ಅಣ್ಣನಿಂದಲ್ಲವೇ ತಂತಿ ಬಂದಿರುವುದು?" ಗುರುಗಳು ಮರುಪ್ರಶ್ನೆ ಕೇಳಿದಾಗಲೇ ಮಠದ ಅಧಿಕಾರಿ ಪುನಃ ಪರಿಶೀಲಿಸಿ ತಮ್ಮ ತಪ್ಪಿನ ಅರಿವಾಗಿ ತಿದ್ದಿಕೊಂಡರು. ಮತ್ತೊಮ್ಮೆ ತಂತಿಯನ್ನು ಓದಿಕೊಂಡು ತಮ್ಮನಿಗೆ ಅಸೌಖ್ಯವೆಂದು, ಅಣ್ಣನವರು ತಂತಿ ಕೊಟ್ಟಿದ್ದರೆಂದು ಖಚಿತಪಡಿಸಿಕೊಂಡರು. ಮತ್ತು ತಮ್ಮ ಮರೆವಿಗಾಗಿ ಕ್ಷಮೆ ಬೇಡಿದರು. ಗುರುವರ್ಯರು "ನಾವು ಮರೆತರೂ ಮರೆಯಬಹುದು, ಆದರೆ ನೀವು ಇಂತಹ ವಿಷಯಗಳ ವಿವರವನ್ನು ಮರೆಯಬಾರದು ಅಲ್ಲವೇ" ಎಂದು ಹೇಳಿದರು. ಗುರುಗಳು ತಂತಿಯನ್ನು ಓದಿಯೂ ಇರಲಿಲ್ಲ, ನೋಡಿಯೂ ಇರಲಿಲ್ಲ. ಆದರೂ ಸಹ ಅವರಿಗೆ ವಿಷಯ ಯಥಾವತ್ತಾಗಿ ಗೊತ್ತಾಗಿತ್ತು.

## ೧೮.

ಒಮ್ಮೆ ಮಳೆಗಾಲದಲ್ಲಿ ಮಳೆಯ ಆರ್ಭಟ ಭೋರಾಟ ಜಾಸ್ತಿಯಾಗಿದ್ದಾಗ ಮಧ್ಯರಾತ್ರಿಯಲ್ಲಿ ಗುರುಗಳು ತಮ್ಮ ಪರಿಚಾರಕನನ್ನು ಕರೆದರು. ".... ಬೀದಿಯಲ್ಲಿರುವ ಶ್ರೀಯುತರು ಜಾರಿ ಪ್ರಜ್ಞೆ ತಪ್ಪಿ ಬಿದ್ದಿದ್ದಾರೆ. ತಕ್ಷಣ ಓಡಿ ಹೋಗಿ ಅವರನ್ನು ಮೇಲಕ್ಕೆಬ್ಬಿಸು" ಎಂದು ಆಣತಿಯಿತ್ತರು. ಸೇವಕನು ಇವೆಲ್ಲಾ ಭ್ರಮೆ ಎಂದುಕೊಂಡು ಪಕ್ಕಕ್ಕೆ ಸರಿದು ಸುಮ್ಮನಾದ. ಕೆಲವು ಸೆಕೆಂಡುಗಳ ನಂತರ ಗುರುಗಳ ಕೊಠಡಿಯಿಂದ ಪ್ರಶ್ನೆ ಕೇಳಿಬಂತು, "ಹೋದೆಯಾ?"

ಗುರುಗಳು ಇದ್ದುದು ತುಂಗಾನದಿಯ ದಕ್ಷಿಣದಲ್ಲಿದ್ದ ನರಸಿಂಹವನದಲ್ಲಿ, ಶೃಂಗೇರಿ ಊರಿದ್ದುದು ತುಂಗಾನದಿಯ ಉತ್ತರದಲ್ಲಿ. ಅದೂ ಮಳೆ ಮತ್ತು ಮಧ್ಯರಾತ್ರಿ ವೇಳೆ.

ಸೇವಕನು "ಹೋಗಬೇಕಲ್ಲಾ, ಹೋಗದಿದ್ದರೆ ಗುರುಗಳಿಗೆ ಅಸಮಾಧಾನವಾಗುವುದಲ್ಲಾ?" ಎಂದು ಮನಸ್ಸಿನಲ್ಲೇ ಗೊಣಗಿಕೊಂಡು ಊರಿಗೆ ಬಂದು ಆ ವ್ಯಕ್ತಿಯ ಮನೆಯ ಮುಂದೆ ನಿಂತನು. ಬಾಗಿಲು ಹಾಕಿತ್ತು. ಇಷ್ಟು ದೂರ ಬಂದು ಹಾಗೆಯೇ ಹೋಗಬಾರದೆಂದು ಎಣಿಸಿ ಬಾಗಿಲು ತಟ್ಟಿದ. ಆ ಗೃಹಸ್ಥರು ಬಾಗಿಲು ತೆರೆದು ಗುರುಗಳ ಸೇವಕನು ತಮ್ಮ ಬಳಿ ಬಂದಿರುವುದನ್ನು ಕಂಡು ಆಶ್ಚರ್ಯಚಕಿತರಾದರು ಮತ್ತು ಬಂದುದೇಕೆಂದು ಕೇಳಿದರು. ಆತನು ಗುರುಗಳು ತನ್ನನ್ನೆಬ್ಬಿಸಿ ಕಳುಹಿಸಿದ್ದನ್ನು ವಿವರವಾಗಿ ಹೇಳಿದ.

ಆ ಗೃಹಸ್ಥರಿಗೆ ಆಶ್ಚರ್ಯವಾಯಿತು. ಅವರೇ ಹೇಳಿದರು, "ಹೌದು, ಕೆಲವೇ ನಿಮಿಷಗಳ ಹಿಂದೆ ಹೊರಗೆ ಹೋಗಿದ್ದೆ. ಹತ್ತುವಾಗ ಮೆಟ್ಟಲಿನಿಂದ ಜಾರಿ ಕೆಳಗೆ ಬಿದ್ದೆ, ಸ್ವಲ್ಪಕಾಲ ಪ್ರಜ್ಞೆ ತಪ್ಪಿತ್ತು. ಆಮೇಲೆ ಎಚ್ಚರವಾಯಿತು. ಕೈ ಕಾಲು ತೊಳೆದುಕೊಂಡು ಒಳಕ್ಕೆ ಬಂದೆ. ಶ್ರೀ ಗುರುವರ್ಯರು ಇದನ್ನೆಂತು ಕಂಡರೋ ನನ್ನ ಅಲ್ಪಮತಿಗೆ ಗೋಚರವಾಗದು" ಎಂದರು.

## ೧೯.

೧೯೫೭ರ ಕಾರ್ತಿಕ ಶುದ್ಧ ಅಷ್ಟಮಿಯಂದು ಶೃಂಗೇರಿಯಲ್ಲಿ ವಿದ್ಯಾಶಂಕರ ದೇವಾಲಯದ ರಥೋತ್ಸವ ನಡೆಯುತ್ತಿತ್ತು. ಲಕ್ವಾ ಹೊಡೆದಿದ್ದ ಕೋಡೂರು ಶಾಮಭಟ್ಟರೆಂಬುವವರು ಆ ರಥೋತ್ಸವವನ್ನು ದರ್ಶಿಸಲು ಮನೆಯ ಮುಂದೆಯೇ ಬೀದಿಯಲ್ಲಿ ಬಹಳ ಪ್ರಯಾಸದಿಂದ ನಿಂತಿದ್ದರು. ಇದನ್ನು ಗಮನಿಸಿದ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಶಾಮಭಟ್ಟರ ಮಗನನ್ನು ಕೈ ಸನ್ನೆ ಮಾಡಿ ಕರೆದರು. ಆ ಕ್ಷಣದಲ್ಲಿಯೇ ಒಂದು ಆಂಜನೇಯ ಮಂತ್ರವನ್ನು ಅವರಿಗೆ ಉಪದೇಶಿಸಿ "ಇದನ್ನು ನಿಮ್ಮ ತಂದೆಯವರಿಗೆ ಕೊಟ್ಟು ಜಪ ಮಾಡಲು ಹೇಳಿ" ಎಂದು ನುಡಿದರು, ಹಾಗೂ ಉಣ್ಣೆಯ ಬಟ್ಟೆಯನ್ನು ಧರಿಸುವಂತೆ ಆದೇಶಿಸಿದರು. ನಂತರ ಮಗನು ಗುರುಗಳಿಗೆ ಸಾಷ್ಟಾಂಗವೆರಗಿ ಆಜ್ಞೆಯನ್ನು ಶಿರಸಾ ವಹಿಸಿ ಪಾಲಿಸುವುದಾಗಿ ಹೇಳಿ ಮನೆಗೆ ಬಂದು ತನ್ನ ತಂದೆಗೆ ಗುರುಗಳು ನೀಡಿದ ಆ ಮಂತ್ರವನ್ನು ಪಠಿಸುವಂತೆ ಹೇಳಿದನು. ತಂದೆಯು ಗುರುವರ್ಯರು ನೀಡಿದ್ದ ಮಂತ್ರದ ಜಪವನ್ನು ಪಠಿಸಲು ಆರಂಭಿಸಿದರು. ಕೆಲವೇ ದಿನಗಳಲ್ಲಿ ಅವರ ಪಾರ್ಶ್ವವಾಯು ಸಂಪೂರ್ಣ ಗುಣವಾಯಿತು. ಹೀಗೆ ಗುರುಗಳು ಭಕ್ತರು ಏನೂ ಕೇಳದಿದ್ದರೂ ಅವರ ಕಷ್ಟಗಳನ್ನು ತಾವೇ ಅರಿತು ಅದಕ್ಕೆ ಪರಿಹಾರವನ್ನು ನೀಡುತ್ತಿದ್ದರು.

## ೨೦.

ಒಮ್ಮೆ ಶೃಂಗೇರಿಯ ಮಠದ ಆವರಣದ ಬಯಲಿನಲ್ಲಿ ಅನ್ನ ಸಂತರ್ಪಣೆ ಪ್ರಾರಂಭಿಸುವ ಸಮಯವಾಗಿತ್ತು. ಅದೇ ವೇಳೆಯಲ್ಲಿ ವಿಪರೀತ ಮೋಡಕವಿದು, ಬಿರುಗಾಳಿ ಬೀಸಿ,

ಇನ್ನೇನು ಭಾರಿ ಮಳೆ ಬರುವ ಹಾಗೆ ಆಗಿತ್ತು. ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಶಾರದಾಂಬಾ ದೇವಾಲಯದಿಂದ ನರಸಿಂಹವನದತ್ತ ಧಾವಿಸುತ್ತಿದ್ದರು. ಆಗ ಜನರು ಕುಳಿತು ಊಟಕ್ಕಾಗಿ ಕಾಯುತ್ತಿದ್ದದ್ದನ್ನು ಕಂಡರು. ಗುರುಗಳು ತಮ್ಮ ಮೇಲ್ವಸ್ತ್ರವನ್ನು ಆಕಾಶದ ಕಡೆ ಮುಖ ಮಾಡಿ ಹಿಡಿದು ಮಂತ್ರವನ್ನು ಜಪಿಸುತ್ತಾ ಅಲ್ಲಿಯೇ ಕೆಲವು ನಿಮಿಷಗಳ ಕಾಲ ನಿಂತರು. ನಂತರ ನರಸಿಂಹವನದತ್ತ ಸಾಗಿದರು. ಅದಾದ ನಂತರ ಕೆಲವೇ ನಿಮಿಷಗಳಲ್ಲಿ ಮಳೆಯ ಸೂಚನೆಯೇ ಇಲ್ಲವೇನೋ ಎನ್ನುವಂತೆ ಮೋಡಗಳೆಲ್ಲವೂ ಚದುರಿಹೋದವು. ಭಕ್ತಾದಿಗಳು ಯಾವುದೇ ತೊಂದರೆ ಇಲ್ಲದೆ ಊಟವನ್ನು ಪೂರೈಸಿ ತಮ್ಮ ತಮ್ಮ ಮನೆಗಳತ್ತ ತೆರಳಿದರು. ಎಲ್ಲಾ ಸುಸೂತ್ರವಾಗಿ ನಡೆದ ನಂತರ ಮತ್ತೆ ಆಕಾಶದಲ್ಲಿ ಮೋಡಗಳು ಕಟ್ಟಿ ಜೋರಾದ ಮಳೆ ಸುರಿಯಲಾರಂಭಿಸಿತು. ಎಲ್ಲರಲ್ಲೂ ಪರಮಾತ್ಮನನ್ನೇ ಕಾಣುವ ಗುರುಗಳ ಇಂಗಿತವನ್ನು ಪ್ರಕೃತಿಯು ನೆರವೇರಿಸದಿರುತ್ತದೆಯೇ?

## ೨೧.

ಸಮಾಜದಲ್ಲಿ ಹೆಸರು ಗಳಿಸಿದ್ದ ವ್ಯಕ್ತಿಯೊಬ್ಬರು ಶೃಂಗೇರಿಗೆ "ತಾವು ಗುರುಗಳ ದರ್ಶನಕ್ಕಾಗಿ ಬರುತ್ತೇವೆ, ದಯವಿಟ್ಟು ಗುರುಗಳ ದರ್ಶನಕ್ಕೆ ಅವಕಾಶ ಕಲ್ಪಿಸಿ ಕೊಡಿ" ಎಂದು ಒಂದು ಮನವಿ ಪತ್ರವನ್ನು ಬರೆದರು. ಆದರೆ ಮಠದಿಂದ ಆ ವ್ಯಕ್ತಿಗೆ ಯಾವುದೇ ಉತ್ತರ ಬರಲಿಲ್ಲ.

ಆ ವ್ಯಕ್ತಿಯು ಆಗ ಮೈಸೂರಿನ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ ರವರಿಗೆ ಪತ್ರ ಬರೆದು ಗುರುಗಳ ಸಂದರ್ಶನಕ್ಕೆ ಏರ್ಪಾಟು ಮಾಡಿಕೊಡುವಂತೆ ಕೇಳಿಕೊಂಡರು. ಆಗ ಮಿರ್ಜಾರವರಿಂದ ಶೃಂಗೇರಿಗೆ ಈ ವಿಷಯವಾಗಿ ಒಂದು ಕಾಗದ ಬಂದಿತು. ಅಧಿಕಾರಿಗಳು ಬೇರೆ ದಾರಿ ಕಾಣದೆ ಅದನ್ನು ಗುರುಗಳಿಗೆ ತಿಳಿಸಿದರು.

ಆಗ ಗುರುಗಳು "ಇದಕ್ಕೆ ಹಿಂದೆ ಬರೆದ ಪತ್ರದ ಬಗ್ಗೆ ಏಕೆ ನನಗೆ ಹೇಳಿರಲಿಲ್ಲ"? ಎಂದು ಅಧಿಕಾರಿಗಳಲ್ಲಿ ಕೇಳಿದರು. ಅದಕ್ಕೆ ಅಧಿಕಾರಿಗಳು "ಗುರುಗಳೇ, ಸಂದರ್ಶನ ಬಯಸಿದ್ದ ವ್ಯಕ್ತಿಯ ಚಾರಿತ್ರ್ಯ ಸರಿ ಇರಲಿಲ್ಲ. ಎಲ್ಲಾ ರೀತಿಯ ದುರಭ್ಯಾಸಗಳು ಇವೆ. ಆದ್ದರಿಂದ ತಮಗೆ ಅರಿಕೆ ಮಾಡಲು ಹಿಂಜರಿದಿದ್ದೆ" ಎಂದರು.

ಅದಕ್ಕೆ ಗುರುಗಳು "ಉತ್ತಮ ಚಾರಿತ್ರ್ಯವಿದ್ದು ಒಳ್ಳೆಯ ಅಭ್ಯಾಸವಿರುವವರಿಗೆ ನಮ್ಮ ಅಗತ್ಯವೇ ಇಲ್ಲ, ಅಂತಹವರು ಧರ್ಮ ಮಾರ್ಗದಲ್ಲಿಯೇ ನಡೆಯುತ್ತಿರುತ್ತಾರೆ. ಯಾರಿಗೆ ಉತ್ತಮ ಚಾರಿತ್ರ್ಯವಿಲ್ಲವೋ, ದುರಭ್ಯಾಸಗಳಿಗೆ ದಾಸರಾಗಿರುತ್ತಾರೋ, ಅಂತಹವರಿಗೆ ನಮ್ಮ ಮಾರ್ಗದರ್ಶನದ ಆವಶ್ಯಕತೆ ಇದೆ. ಅವರಿಗೆ ಬರಲು ಪತ್ರ ಬರೆಯಿರಿ, ಅವರು

ಬರಲಿ, ಶ್ರೀ ಶಾರದಾಂಬೆ, ಚಂದ್ರಮೌಳೀಶ್ವರರು ಅವರನ್ನು ಅನುಗ್ರಹಿಸುತ್ತಾರೆ" ಎಂದರು.

ಆ ನಂತರ ಆ ವ್ಯಕ್ತಿ ಗುರುಗಳ ದರ್ಶನ ಪಡೆದುಕೊಂಡರು. ಗುರುಗಳ ದರ್ಶನಕ್ಕೆ ಬಂದ ಆ ವ್ಯಕ್ತಿ ಗುರುಗಳ ದರ್ಶನದಿಂದ ಪ್ರಭಾವಿತರಾದರು. ಕೆಲವೇ ದಿನಗಳಲ್ಲಿ ಆ ವ್ಯಕ್ತಿಯ ನಡೆ–ನುಡಿಯಲ್ಲಿ ಮಹತ್ತರ ಬದಲಾವಣೆಯಾಗಿ ಗುರುಗಳ ಪರಮ ಭಕ್ತರಾದರು. ಹೀಗೆ ಗುರುಗಳು ಎಲ್ಲರನ್ನು ಸಮನಾಗಿ ಕಂಡು, ಧರ್ಮಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸಿ ಸರಿ ದಾರಿಗೆ ತರುತ್ತಿದ್ದರು.

## ೨೨.

ಮಠದ ಆನೆ ಒಮ್ಮೆ ಚಂಡಿ ಹಿಡಿದಿತ್ತು. ಬಹಳ ದಿನದವರೆಗೆ ಆಹಾರವನ್ನು ಮುಟ್ಟದೆ ತನ್ನ ಹತ್ತಿರ ಯಾರನ್ನೂ ಸೇರಿಸುತ್ತಿರಲಿಲ್ಲ. ಮಾವುತನಿಗೂ ಅದನ್ನು ಸರಿದಾರಿಗೆ ತರಲು ಆಗಲಿಲ್ಲ. ಜನರು ಆ ಆನೆಗೆ ಹುಚ್ಚು ಹಿಡಿದಿದೆ ಎಂದು ತೀರ್ಮಾನಿಸಿ ಕಾಡಿಗೆ ಕಳುಹಿಸುವ ಯೋಚನೆಯಲ್ಲಿದ್ದರು. ಅಂತರ್ಮುಖಿಗಳಾಗಿದ್ದ ಗುರುಗಳು ಒಮ್ಮೆ ಬಹಿರ್ಮುಖರಾದರು. ಆನೆಯ ಕೂಗಾಟ ಕೇಳಿಸಿತು. ಕೂಡಲೇ ಗಜಶಾಲೆಯತ್ತ ಧಾವಿಸಿದರು. ಅಲ್ಲಿದ್ದ ಜನರು ಗುರುಗಳಿಗೆ "ಆನೆಗೆ ಹುಚ್ಚು ಹಿಡಿದಿದೆ, ಅದರ ಹತ್ತಿರ ಹೋದರೆ ಯಾರನ್ನು ಬಿಡುವುದಿಲ್ಲ, ತಾವು ದಯವಿಟ್ಟು ಅದರ ಹತ್ತಿರ ಹೋಗಬೇಡಿರಿ" ಎಂದು ವಿನಂತಿಸಿಕೊಂಡರು. "ಇರಲಿ ನಾವು ಒಮ್ಮೆ ನೋಡುತ್ತೇವೆ" ಎಂದ ಗುರುಗಳು ಆನೆಯ ಹತ್ತಿರ ಹೋಗಿ ಅದರ ಸೊಂಡಲಿನ ಮೇಲೆ ಕೈಯಾಡಿಸುತ್ತ ಮೃದುವಾದ ಧ್ವನಿಯಲ್ಲಿ "ಯಾಕಪ್ಪ ಏನಾಗಿದೆ?" ಎಂದು ಕೇಳಿದರು.

ಆನೆಯು ತಲೆಬಾಗಿ ತನ್ನ ಮುಂಗಾಲನ್ನು ಎತ್ತಿ ತೋರಿಸಿತು. ಗುರುಗಳು ಒಮ್ಮೆ ಅದರ ಕಾಲನ್ನು ನೋಡಿದರು. ಅದರ ಅಂಗಾಲಿಗೆ ಮೊಳೆಯೊಂದು ಚುಚ್ಚಿಕೊಂಡಿತ್ತು. ಗುರುಗಳು ನೌಕರರನ್ನು ಕರೆದು ಆ ಮೊಳೆಯನ್ನು ಜೋಪಾನವಾಗಿ ತೆಗೆಸಿದರು. ಆದ ಗಾಯಕ್ಕೆ ಚಿಕಿತ್ಸೆ ಮಾಡಿಸಲಾಯಿತು. ಆನೆ ಯಾವ ತಕರಾರನ್ನು ಮಾಡದೆ ಚಿಕಿತ್ಸೆಗೆ ಸ್ಪಂದಿಸಿತು. ಹೀಗೆ ಗುರುಗಳು ಕೇವಲ ಮನುಷ್ಯರಲ್ಲಲ್ಲದೇ ಪ್ರಾಣಿಗಳಲ್ಲಿಯೂ ದಯೆಯಿರಿಸಿ ಅದರ ಮಾತನ್ನೂ ಸಹ ಗ್ರಹಿಸಿ ಅದರ ಕಷ್ಟಗಳನ್ನು ಪರಿಹರಿಸುತ್ತಿದ್ದರು.

## ೨೩.

ಮಹಾದೇವ ಎನ್ನುವ ೧೦ ವರ್ಷದ ಒಬ್ಬ ವಟು ಚಂದ್ರಶೇಖರ ಭಾರತೀ ಸ್ವಾಮಿಗಳಲ್ಲಿ ಸಂನ್ಯಾಸ ದೀಕ್ಷೆ ಬೇಡಿದ. ಗುರುಗಳಿಂದ ಯಾವುದೇ ರೀತಿಯ ಉತ್ತರ ಬರಲಿಲ್ಲ. ಆದರೆ ಆ ಹುಡುಗ ಅಷ್ಟಕ್ಕೇ ಸುಮ್ಮನಾಗದೆ ಎಸೆಸೆಲ್ಸಿ ಆದಮೇಲೆ ಮತ್ತೆ ಸಂನ್ಯಾಸ ನೀಡುವಂತೆ

ಕೇಳಿಕೊಂಡ. ಪಿಯುಸಿ ಆದಮೇಲೆ ಮತ್ತೆ ಕೇಳಿಕೊಂಡ. ಹೀಗೆ ಹಲವಾರು ಬಾರಿ ಕೇಳಿಕೊಂಡ ನಂತರ ಗುರುಗಳು ಆತನನ್ನು ಕರೆದು "ನಿನಗೆ ಸಂನ್ಯಾಸವೇಕೆ ಬೇಕು?" ಎಂದು ಪ್ರಶ್ನಿಸಿದರು. ಮತ್ತು ಎಷ್ಟು ಗಾಯತ್ರಿ ಮಾಡುತ್ತಿದ್ದೀಯ? ಎಂದು ಕೇಳಿದರು. ಅದಕ್ಕೆ ಆ ಹುಡುಗ ೧೦೮ ಗಾಯತ್ರಿ ಮಾಡುತ್ತಿರುವುದಾಗಿ ಹೇಳಿದ. ಗುರುಗಳು ಗಾಯತ್ರಿ ಮಂತ್ರದ ಅರ್ಥ ಕೇಳಿದರು. ಹುಡುಗನಿಗೆ ಗೊತ್ತಿರಲಿಲ್ಲ. ಗುರುಗಳು ಆ ಹುಡುಗನಿಗೆ ವೇದ ಪಾಠಕ್ಕೆ ಸೇರಿ ವೇದ ಕಲಿಯುವಂತೆಯೂ, ಪ್ರತಿ ದಿವಸ ೩೦೦೦ ಗಾಯತ್ರಿ ಮಾಡುವಂತೆಯೂ ಆದೇಶಿಸಿದರು. ಆದರೆ ಆ ಹುಡುಗ "ನನಗೆ ೧೦೮ ಗಾಯತ್ರಿ ಮಾಡುವುದೇ ಕಷ್ಟವಾಗಿದೆ" ಎಂದು ತಿಳಿಸಿದ. "ದೇವಿ ಶಕ್ತಿ ಕೊಡುತ್ತಾಳೆ" ಎಂದು ಗುರುಗಳು ನುಡಿದರು. ಗುರುಗಳ ಆ ಒಂದು ಮಾತು ಆತನಿಗೆ ಸಂಜೀವಿನಿಯಾಯಿತು. ಪ್ರತಿ ದಿವಸ ೬೦೦೦ ಗಾಯತ್ರಿ ಜಪ ಮಾಡಲು ಪ್ರಾರಂಭ ಮಾಡಿದ. ಆತನ ಮುಖದಲ್ಲಿ ತೇಜಸ್ಸು ಬರಲು ಆರಂಭವಾಯಿತು.

ಹೀಗೆ ಮಾಡುತ್ತಾ, ಮಾಡುತ್ತಾ ತಾನು ಬಂದಿದ್ದ ಉದ್ದೇಶವನ್ನೇ ಮರೆತುಬಿಟ್ಟಿದ್ದ. ಒಂದು ದಿವಸ ಶೃಂಗೇರಿಯಲ್ಲಿ ವದಂತಿ ಹಬ್ಬಿತು, "ಗುರುಗಳು ನಾಳೆ ಯಾರಿಗೋ ಸಂನ್ಯಾಸ ದೀಕ್ಷೆ ನೀಡುತ್ತಾರಂತೆ" ಎಂದು. ಗುರುಗಳು ಯಾರಿಗೆ ಸಂನ್ಯಾಸ ಕೊಡಬಹುದು ಎಂದು ಎಲ್ಲರಿಗೂ ಕುತೂಹಲವಿದ್ದೇ ಇತ್ತು. ಎಲ್ಲರೂ ಮರುದಿನದ ಆ ಕಾರ್ಯಕ್ರಮಕ್ಕೇ ಕಾದು ಕುಳಿತಿದ್ದರು. ಮಠದಲ್ಲಿನ ಪುರೋಹಿತರು "ಯಾರಿಗೆ ಸಂನ್ಯಾಸ ಗುರುಗಳೇ?" ಎಂದು ಕೇಳಿದರು. ಆದರೆ ಗುರುಗಳು ಯಾರಿಗೂ ಏನನ್ನೂ ಹೇಳಲಿಲ್ಲ. ಬರಿ ಸಂನ್ಯಾಸಕ್ಕೆ ಏರ್ಪಾಟು ಮಾಡಲು ಹೇಳಿದರಷ್ಟೆ. ಆ ಹುಡುಗನೂ ಸಹ ಎಲ್ಲರಂತೆ ಗುರುಗಳು ನೀಡುವ ಆ ಸನ್ಯಾಸ ದೀಕ್ಷೆಯನ್ನು ನೋಡಲು ಬಂದ. ಅಷ್ಟರಲ್ಲಾಗಲೇ ಅವನು ಸಂನ್ಯಾಸಿಯಾಗುವ ಬಯಕೆಯನ್ನೇ ಮರೆತಿದ್ದ. ಆ ದಿನ ಬಂದೇ ಬಿಟ್ಟಿತು. ಗುರುಗಳು ಚೌರ ಮಾಡುವವರನ್ನ ಕರೆದರು. ಹಾಗೆ ಮಹಾದೇವ ಬ್ರಹ್ಮಚಾರಿಯನ್ನೂ ಸಹ ಬರಲು ಹೇಳಿದರು. ಎಲ್ಲರೂ ನೋಡುನೋಡುತ್ತಿದ್ದಂತೆಯೇ ಆ ವಟುವಿಗೆ ಗುರುಗಳು ಸಂನ್ಯಾಸ ದೀಕ್ಷೆಯನ್ನು ನೀಡಿಯೇ ಬಿಟ್ಟರು. ಸಂನ್ಯಾಸ ದೀಕ್ಷೆಯನ್ನು ಆ ಹುಡುಗ ಮರೆತಿದ್ದರೂ ಗುರುಗಳು ಮರೆತಿರಲಿಲ್ಲ. ಆತನಲ್ಲಿ ಇದ್ದ ಶ್ರದ್ಧೆಯನ್ನು ನೋಡಿ ಗುರುಗಳೇ ಆತನಿಗೆ ಸಂನ್ಯಾಸಿಯಾಗುವ ಯೋಗ್ಯತೆಯನ್ನೂ ಕರುಣಿಸಿ, ದೀಕ್ಷೆಯನ್ನು ಸಹ ನೀಡಿದರು. ಹೀಗೆ ಗುರುಗಳು ಆಚಾರವಂತರಿಗೆ ಸಂಪೂರ್ಣವಾಗಿ ಅನುಗ್ರಹ ಮಾಡುತ್ತಿದ್ದರು.

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

# ❀ ಭಕ್ತ ಜನಮನ ❀

**ಹುರಗಲವಾಡಿ ಲಕ್ಷ್ಮೀ ನರಸಿಂಹ ಶಾಸ್ತ್ರಿಗಳು**
**ಲೇಖಕರು**
**ರಾಮಕೃಷ್ಣ ನಗರ, ಮೈಸೂರು**

ನಮ್ಮ ತಾಯಿಗೆ ಚಂದ್ರಶೇಖರ ಭಾರತೀ ಸ್ವಾಮಿಗಳು ಒಂದು ಶಾರದಮ್ಮನವರ ಗಂಧದ ವಿಗ್ರಹ ಕೊಟ್ಟಿದ್ದರು. ನಮ್ಮ ತಾಯಿ ಮಗು ಆಗಿದ್ದಾಗ, ಗುರುಗಳು ಬ್ರಹ್ಮಚಾರಿಯಾಗಿದ್ದಾಗ ಎತ್ತಿ ಆಡಿಸಿದ್ದರಂತೆ. ನಮ್ಮ ತಂದೆ ಮತ್ತು ತಾಯಿ ಒಂದೇ ದಿವಸ ತೀರಿಕೊಂಡರು. ಆಗ ನನಗೆ ಮೂರು ವರ್ಷ. ನಮ್ಮ ಸೋದರ ಮಾವ ನನ್ನ ಆರನೇ ವಯಸ್ಸಿನಲ್ಲಿ ಶೃಂಗೇರಿಗೆ ಕರೆದುಕೊಂಡು ಹೋಗಿದ್ದರು. ಆಗ ಶೃಂಗೇರಿಯಲ್ಲಿ ದೀಪವಿರಲಿಲ್ಲ. ಪ್ರತಿ ಮೂಲೆಯಲ್ಲಿ ಲಾಂದ್ರವನ್ನು ಅಂಟಿಸೋರು. ನಾನು ಶೃಂಗೇರಿಗೆ ಹೋದಾಗ ಮಳೆಗಾಲ. ಚಂದ್ರಶೇಖರ ಭಾರತೀ ಸ್ವಾಮಿಗಳು, ಚಂದ್ರಮೌಳೀಶ್ವರನ ತೊಟ್ಟಿಯಲ್ಲಿ ವಾಸ ಮಾಡುತ್ತಿದ್ದರು.

ಯಾವಾಗಲೂ ನರಸಿಂಹವನದಲ್ಲೇ ವಾಸ ಮಾಡುತ್ತಿದ್ದ ಗುರುಗಳು, ಮಳೆಗಾಲದಲ್ಲಿ ಮಾತ್ರ ಕೆಲವೊಮ್ಮೆ ಚಂದ್ರಮೌಳೀಶ್ವರನ ತೋಟ್ಟಿಯಲ್ಲಿ ವಾಸ ಮಾಡುತ್ತಿದ್ದರು. ನನಗೆ ಆ ಚಿಕ್ಕ ವಯಸ್ಸಿನಲ್ಲೇ ಚಂದ್ರಮೌಳೀಶ್ವರನ ಪೂಜೆ ನೋಡಬೇಕೆಂಬ ಆಸೆ. ನಮ್ಮ ತಾಯಿಯ ತಾಯಿ ಯಾರನ್ನಾದರೂ ಜೊತೆಮಾಡಿ ನನ್ನನ್ನು ಮಠಕ್ಕೆ ಕಳುಹಿಸುತ್ತಿದ್ದರು.

ಆಗ ಪೂಜೆಗೆ ಈಗಿನ ಹಾಗೆ ಸಾವಿರಾರು ಜನ ಸೇರುತ್ತಿರಲಿಲ್ಲ. ಎಂಟು–ಹತ್ತು ಜನ ಪುರೋಹಿತರು ಮತ್ತು ಪರಿಚಾರಕರು ಅಷ್ಟೇ. ಪೂಜೆಯೆಲ್ಲಾ ಆದನಂತರ, ಹೋಗಿ ನಮಸ್ಕಾರ ಮಾಡಿದರೆ, ಗುರುಗಳು ಒಂದು ಪಟ್ಟಣದ ತುಂಬಾ ಕಲ್ಲುಸಕ್ಕರೆ, ಬಾದಾಮಿ ಎಲ್ಲಾ ಕೊಡುತ್ತಿದ್ದರು. ಈ ತರಹ ಮೂರು–ನಾಲ್ಕು ಬಾರಿ ನನಗೆ ಗುರುಗಳ ದರ್ಶನವಾಗಿದೆ. ಸ್ವಲ್ಪ ದಿನದ ನಂತರ ಮಂಡ್ಯದಿಂದ ನಮ್ಮ ಅಜ್ಜ, ನನ್ನನ್ನು ಕಳುಹಿಸಿಕೊಡುವಂತೆ ಕಾಗದ ಬರೆದರು. ಹೊರಡುವ ಮುನ್ನ ನನಗೆ ನಮ್ಮ ಸೋದರಮಾವ ಗುರುಗಳ ದರ್ಶನ ಮಾಡಿಸಿದರು. ನನ್ನ ಒಂಬತ್ತನೇ ವಯಸ್ಸಿನಲ್ಲಿ ನನಗೆ ಮತ್ತೊಮ್ಮೆ ಗುರುಗಳ ದರ್ಶನ ಮಾಡುವ ಸೌಭಾಗ್ಯ ದೊರಕಿತ್ತು. ಗುರುಗಳು ಎರಡನೇ ವಿಜಯ ಯಾತ್ರೆಗೆ ಹೋಗುವಾಗ ನಮ್ಮ ಮಂಡ್ಯಕ್ಕೂ ಸಹ ಬಂದಿದ್ದರು. ನನ್ನ ಅಜ್ಜ ಮಂಡ್ಯದಲ್ಲಿ ಪುರೋಹಿತರಾಗಿದ್ದರು. ಗುರುಗಳಿಗೆ ನಮ್ಮ ಅಜ್ಜ ಫಲವನ್ನು ಅರ್ಪಿಸಿದರು. ಆಗ ಗುರುಗಳು ನನ್ನ ಮೇಲೆ ಮೌನವಾಗಿ ಒಮ್ಮೆ ದೃಷ್ಟಿ ಬೀರಿದರು.

ನನ್ನ ಹದಿನೆಂಟು–ಹತ್ತೊಂಬತ್ತನೇ ವಯಸ್ಸಿನಲ್ಲಿ ನನ್ನ ಇಂಟರ್ಮೀಡಿಯೆಟ್ ಪರೀಕ್ಷೆ ಮುಗಿಯಿತು. ಆಗ ಬಿಎಸ್ಸಿಗೆ ಸೇರಲು ನನ್ನ ಬಳಿ ಹಣವೂ ಇರಲಿಲ್ಲ ಮತ್ತು ಕಾಲೇಜು ಬಹಳ ದೂರವಿದ್ದು ನಡೆದುಕೊಂಡು ಹೋಗುವುದಕ್ಕೂ ಆಗುತ್ತಿರಲಿಲ್ಲ. ಹೀಗಾಗಿ ನಾನು ಒಂದು ವರ್ಷ ಮನೆಯಲ್ಲಿಯೇ ಇದ್ದೆ. ಆಗ ಶೃಂಗೇರಿಗೆ ಹೋಗುವ ಅವಕಾಶ ಮತ್ತೆ ದೊರೆಯಿತು. ಹಾಗೆ ಹೋದ ನಾನು ಸುಮಾರು ಒಂದೂವರೆ ತಿಂಗಳು ಅಲ್ಲೇ ಇದ್ದೆ. ನನಗೆ ಮೊದಲಿನಿಂದಲೂ ಪದ್ಯವನ್ನು ಓದುವ ಹುಚ್ಚು ಇತ್ತು. ಮನೆಯಲ್ಲೇ ಕೂತು ಪದ್ಯಗಳನ್ನು ಹಾಡಿಕೊಳ್ಳುತ್ತಿದ್ದೆ. ಪಕ್ಕದ ಸ್ಕೂಲಿನವರು ಬಂದು, “ನಾಳೆ ಸರಸ್ವತಿ ಪೂಜೆ ಇದೆ, ನಮ್ಮ ಸ್ಕೂಲಿನಲ್ಲಿ ಪದ್ಯವಾಚನ ಮಾಡಿ” ಎಂದು ಕೇಳಿದರು. ಅದಾದ ನಂತರ ಮಠಕ್ಕೆ ಸಂಬಂಧಪಟ್ಟಂತೆ ಮತ್ತೊಂದು ಕಾರ್ಯಕ್ರಮ ನಡೆಯಿತು. ಆ ಕಾರ್ಯಕ್ರಮವಾದಾಗ, ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ವೆಂಕಟರಾಮಯ್ಯರವರು, ನನ್ನನ್ನು ಕರೆದು “ನೀನು ಬಹಳ ಚೆನ್ನಾಗಿ ಪದ್ಯವನ್ನು ಓದುತ್ತೀಯ, ಗುರುಗಳ ಮುಂದೆ ಬಂದು ಓದು” ಎಂದು ಹೇಳಿದರು. ಒಂದು ದಿನ “ನಾಲ್ಕು ಗಂಟೆಗೆ ಬರಬೇಕಂತೆ ಗುರುಗಳ ದರ್ಶನಕ್ಕೆ” ಎಂದು ಕರೆಬಂತು. ಶ್ರೀ ವಿದ್ಯಾತೀರ್ಥ ಸ್ವಾಮಿಗಳು ಮಹಡಿ ಮೇಲೆ ಇದ್ದರು. ಸುಮಾರು ಒಂದೂವರೆ ಘಂಟೆಗಳ ಕಾಲ ಪದ್ಯಗಳನ್ನು ಅವರ ಮುಂದೆ

ಓದಿದೆ. ಅವರ ಆಶೀರ್ವಾದವನ್ನು ಪಡೆದು ನಂತರ ಕೆಳಗಡೆ ಇಳಿದು ಬಂದೆ. ಕೆಳಗಡೆ ಇಳಿದು ಬಂದಾಗ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ಆಪ್ತ ಸಹಾಯಕರಾದ ರಾಮ ಸೋಮಯಾಜಿಗಳು ನನ್ನನ್ನು "ಎಲ್ಲಿಂದ ಬರುತ್ತಿದ್ದೀಯ?" ಎಂದು ಕೇಳಿದರು. ನಾನು ಶ್ರೀ ವಿದ್ಯಾತೀರ್ಥ ಸ್ವಾಮಿಗಳ ದರ್ಶನ ಮಾಡಿ ಪದ್ಯ ಓದಿದ್ದನ್ನು ಹೇಳಿದೆ. ನಮ್ಮ ಗುರುಗಳ ಮೇಲೆ (ಚಂದ್ರಶೇಖರ ಭಾರತೀ ಸ್ವಾಮಿಗಳು) ಬರೆದುಕೊಂಡು ಬಾ ಓದುವಿಯಂತೆ ಎಂದರು. ನಾನು ಸುಮ್ಮನೆ ನಿರಾಕರಿಸಿ ಬಂದುಬಿಟ್ಟೆ. ನಾನು ಮೈಸೂರಿಗೆ ಹೊರಡುವ ಸಂದರ್ಭ ಬಂತು. ಆಗ ನಮ್ಮ ಸೋದರ ಮಾವ ಗುರುಗಳಿಗೆ ನನ್ನ ಪರಿಚಯ ಮಾಡಿಸಿದರು. ಇಬ್ಬರು ಜಗದ್ಗುರುಗಳು ಕೆಳಗೆ ಬಂದರು. ಸಾಕ್ಷಾತ್ ಸೂರ್ಯ–ಚಂದ್ರರಂತೆಯೇ ಕಾಣುತ್ತಿದ್ದರು. ಗುರುಗಳು ಫಲ ಮಂತ್ರಾಕ್ಷತೆ ಕೊಟ್ಟರು. ಆಗ ಅವರನ್ನು ಹತ್ತಿರದಿಂದ ಕಂಡ ನನಗೆ ಇಂಥಾ ಮಹಾತ್ಮರ ಮುಂದೆ ಪದ್ಯ ಓದುವುದಿಲ್ಲವೆಂದೆನಲ್ಲಾ, ಎಂದು ಬಹಳ ನೋವಾಯಿತು. ನಂತರ ನಾನು ಮೈಸೂರಿಗೆ ಬಂದು ಬಿಎ ತರಗತಿಗೆ ಸೇರಿ ಅದನ್ನೂ ಬಿಟ್ಟು, ಅಂಚೆ ಇಲಾಖೆಗೆ ಗುಮಾಸ್ತನಾಗಿ ಸೇರಿಕೊಂಡೆ.

ಇದಾಗಿ ನನಗೆ ಮದುವೆಯಾಗಿ ನನ್ನ ಮೂವತ್ತು–ಮೂವತ್ತೊಂದನೇ (೧೯೬೦) ವಯಸ್ಸಿನಲ್ಲಿ ಮೈಸೂರಿನಲ್ಲಿ ಕೇಂದ್ರ ಸರ್ಕಾರದ ನೌಕರರ ಮುಷ್ಕರವಾಯಿತು. ಆಗ ನಾನು ಮೈಸೂರು ಜಿಲ್ಲೆಗೆ ನಾಯಕ. ಪ್ರತಿಭಟನೆ ಮಾಡಿಸಬೇಕಾಯಿತು. ಮೈಸೂರು, ಮಂಡ್ಯ, ಕೊಡಗು, ಚಿಕ್ಕಮಗಳೂರು, ಹಾಸನ ಈ ಐದು ಜಿಲ್ಲೆಗಳಲ್ಲಿಯೂ ಪ್ರತಿಭಟನೆ ಮಾಡಿದೆವು. ಪ್ರತಿಭಟನೆ ಮಾಡಿದ ಸಲುವಾಗಿ ನನಗೆ ಶಿಕ್ಷೆಯ ರೂಪದಲ್ಲಿ ಕೊಪ್ಪಕ್ಕೆ ವರ್ಗ ಮಾಡಿದರು. ನನಗಿಂತ ಕಡಿಮೆ ತಪ್ಪು ಮಾಡಿದವರಿಗೆ ಹಿಂಬಡ್ತಿ ನೀಡಲಾಯಿತು. ಕೊಪ್ಪಕ್ಕೆ ಹೋದ ನಂತರ ಪ್ರತಿ ಭಾನುವಾರವೂ ಶೃಂಗೇರಿಗೆ ಹೋಗುತ್ತಿದ್ದೆ. ಸುಮಾರು ಎರಡು ವರ್ಷಗಳ ಕಾಲ ಕೊಪ್ಪದಲ್ಲಿ ಇದ್ದೆ. ಒಂದು ವಾರವೂ ತಪ್ಪದೆ ಶೃಂಗೇರಿಗೆ ಹೋಗುತ್ತಿದ್ದೆ. ಆಗ ನನಗೆ ಶೃಂಗೇರಿಯ ಇತಿಹಾಸ, ಶ್ರೀ ಶಂಕರಾಚಾರ್ಯರ ಇತಿಹಾಸವನ್ನೆಲ್ಲ ಕೇಳಿ ನನ್ನಲ್ಲಿ ಬದಲಾವಣೆ ಬಂತು. ಅಷ್ಟು ದಿವಸ ಇದ್ದ ಕಮ್ಯುನಿಸಂ ಮೇಲಿನ ಒಲವು ಕಡಿಮೆಯಾಗಿ, ಅದರ ಮೇಲೆ ತಿರಸ್ಕಾರ ಹುಟ್ಟಿತು. ಅಷ್ಟರಲ್ಲಿ ನಮ್ಮ ಸೋದರ ಮಾವನ ಮನೆಯಲ್ಲಿ ಒಂದು ಮದುವೆಯಾಯಿತು. ನನ್ನದೇ ಸಂಪೂರ್ಣ ಓಡಾಟ. ಇನ್ನೂ ನನಗೆ ನಾಲ್ಕು ದಿನ ರಜ ಇದ್ದಿದ್ದರಿಂದ ನಾಳೆ ನೀರು ಹಾಕಿಕೊಂಡು ಹೋಗುವಂತೆ ನನಗೆ ಮಾವ ಹೇಳಿದರು. ಆದ್ದರಿಂದ ಅಲ್ಲಿಯೇ ಉಳಿದೆ. ಒಂದು ಹಗಲು, ನಾನು ಅಲ್ಲಿಯೇ ಪೇಪರ್ ಓದುತ್ತಾ ಕುಳಿತಿದ್ದೆ. ಮನೆ ಕೆಲಸದಾಕೆ ಮನೆಗೆ ಬಂದಳು. ನಮ್ಮ ಅತ್ತೆಯನ್ನು "ಏನ್ರವ್ವಾ ನಂಟರೆಲ್ಲರೂ ಹೋದರೆ?" ಎಂದು ಕೇಳಿದಳು. ಆಗ ನಮ್ಮ ಅತ್ತೆ ನೀಡಿದ ಉತ್ತರ ನನಗೆ ಬೇಸರ ತರಿಸುವಂತೆ ಇತ್ತು. ಅದು ನನ್ನ ಕಿವಿಗೆ ಬಿತ್ತು. ತಕ್ಷಣ ಎದ್ದೆ, ನನ್ನ ಬಟ್ಟೆಗಳನ್ನು ಬ್ಯಾಗಿಗೆ ಹಾಕಿಕೊಂಡೆ, ಅತ್ತೆಗೆ ಹೇಳಿ ಹೊರಟು ಕೊಪ್ಪಕ್ಕೆ ಬಂದೆ.

ಮುಂದಿನ ವಾರದಿಂದಲೇ ಶೃಂಗೇರಿಗೆ ಹೋಗುವುದನ್ನು ನಿಲ್ಲಿಸಿಬಿಟ್ಟೆ. ನನಗೆ ಬಹಳ ಬೇಸರವಾಗಿತ್ತು. ನನ್ನ ರೂಮಿನಲ್ಲೇ ಗೋಡೆಯೊರಗಿ ಕುಳಿತುಕೊಂಡೆ. ಗೋಡೆಯ ಮೇಲೆ ಒಂದು ಕಡೆ ಗಣಪತಿಯ ಫೋಟೋ, ಮತ್ತೊಂದು ಕಡೆ ಚಂದ್ರಶೇಖರ ಭಾರತೀ ಸ್ವಾಮಿಗಳ ಫೋಟೋ ಹಾಕಿಕೊಂಡಿದ್ದೆ. ಅದನ್ನೇ ನೋಡುತ್ತಾ ಸುಮ್ಮನೆ ಕುಳಿತೆ. ಯಾವ ಪುಸ್ತಕ ನೋಡಿದರೂ, ಎಲ್ಲಾ ಓದಿರುವುದೇ. ಯಾವುದರಲ್ಲೂ ಆಸಕ್ತಿ ಬರುತ್ತಾ ಇಲ್ಲ. ಇದ್ದಕ್ಕಿದ್ದ ಹಾಗೆ ನನಗೆ ಹೊಳೆದು, ನಾನು ಮಾಡಿದ್ದ ಟಿಪ್ಪಣಿಗಳನ್ನು ನೋಡುತ್ತಾ ಕುಳಿತೆ.

ನಂತರ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಜೀವನ ಚರಿತ್ರೆಯನ್ನು ಬರೆಯಲು ಶುರುಮಾಡಿದೆ. ಬರೆಯಲು ಶುರುಮಾಡಿದ ನಂತರ ನನ್ನ ಮನಸ್ಸಿಗೆ ಪ್ರಕಾಂಡ ಶಾಂತಿ ದೊರಕಿದಂತಾಯಿತು. ಎರಡು ತಿಂಗಳಿನಲ್ಲಿ ಪುಸ್ತಕವನ್ನು ಬರೆದು ಮುಗಿಸಿದೆ. ಪುಸ್ತಕ ಬರೆಯುವುದಕ್ಕೆಂದೇ ಕೊಪ್ಪಕ್ಕೆ ವರ್ಗ ಆಗಿತ್ತೇನೋ ಎನ್ನುವಂತೆ, ಪುಸ್ತಕ ಬರೆದು ಮುಗಿಸಿದ ಮರುದಿನವೇ ನನಗೆ ಮೈಸೂರಿಗೆ ವರ್ಗವಾಗಿರುವ ಪತ್ರ ತಲುಪಿತು. ಮುದ್ರಣ ಮಾಡಿಸಲು ನಾಲ್ಕಾರು ಜನರನ್ನು ಸಹಾಯ ಕೇಳಿದೆ. ಯಾರಿಂದಲೂ ನನಗೆ ಸರಿಯಾದ ಸಹಕಾರ ಸಿಗಲಿಲ್ಲ. ಹೀಗೆ ಹುಡುಕುತ್ತಿದ್ದಾಗ ಒಮ್ಮೆ ನಾನು ಪಿ ಆರ್ ಹರಿಹರನ್ ರವರ ಮನೆಗೆ ಹೋಗಿದ್ದೆ. ಅವರ ಮನೆಗೆ ಬಂದಿದ್ದ ಕೆ ಆರ್ ವೆಂಕಟರಾಮನ್ ಎಂಬುವವರು ನನಗೆ ಪುಸ್ತಕವನ್ನು "ಜಗದ್ಗುರು ವಿದ್ಯಾತೀರ್ಥ ಸ್ವಾಮಿಗಳಿಗೆ ತೋರಿಸಿ ನಂತರ ಮುದ್ರಣ ಮಾಡಿ" ಎಂದು ಸಲಹೆ ನೀಡಿದರು. ಹರಿಹರನ್‌ರವರು ತಾವೇ ಜಗದ್ಗುರುಗಳಿಗೆ ತಲುಪಿಸುವುದಾಗಿ ಹೇಳಿದರು.

ಹಾಗಾಗಿ ಒಂದು ಕಾಪಿ ಮಾಡಿ ಶೃಂಗೇರಿಗೆ ಕೊಟ್ಟು ಕಳುಹಿಸಿದೆ. ಆರು ತಿಂಗಳಾದರೂ ಉತ್ತರ ಬರಲಿಲ್ಲ. ನನ್ನ ಸೋದರಮಾವನಿಗೆ ಪತ್ರ ಬರೆದೆ. ನನಗೆ ಕಳಿಸು ಆ ಪುಸ್ತಕವನ್ನ ಎಂದರು. ಕಳುಹಿಸಿದ ಹದಿನೈದು ದಿನದಲ್ಲೇ ಪತ್ರ ಬಂತು, "ಗುರುಗಳು ನಿನ್ನನ್ನು ನೋಡಬೇಕಂತ ಇದ್ದಾರೆ ಬಾ" ಎಂದು. ನಾನು ಶೃಂಗೇರಿಗೆ ಹೋದೆ. ನಮ್ಮ ಸೋದರ ಮಾವ ಮಠಕ್ಕೆ ಕರೆದುಕೊಂಡು ಹೋದರು. ಗುರುಗಳು "ಯಾರು ಇವರು?" ಎಂದು ಕೇಳಿದರು. ಅದಕ್ಕೆ ನಮ್ಮ ಸೋದರಮಾವ, "ಇವರೇ ಪುಸ್ತಕ ಬರೆದಿರುವವರು" ಎಂದು ಹೇಳಿದರು. ಗುರುಗಳು ಸುಮಾರು ಒಂದು ಗಂಟೆಯ ಕಾಲ ಸಮಜಾಯಿಷಿಯನ್ನು ಕೇಳಿದರು. ನಾನು ಪ್ರತಿಯೊಂದಕ್ಕೂ ಸರಿಯಾದ ಉತ್ತರವನ್ನು ನೀಡಿದೆ. ಪುಸ್ತಕವನ್ನು ಓದಿದ ಶ್ರೀ ವಿದ್ಯಾತೀರ್ಥ ಸ್ವಾಮಿಗಳು "ಪುಸ್ತಕ ತುಂಬಾ ಚೆನ್ನಾಗಿದೆ, ನಾಳೆ ಬನ್ನಿ ಫಲ ಮಂತ್ರಾಕ್ಷತೆ ಕೊಡುತ್ತೇನೆ" ಎಂದರು. ಮಾರನೇ ದಿವಸ ಹೋದೆ. ಗುರುಗಳು "ಮುದ್ರಣ ಮಾಡಲು ಹಣಕ್ಕೆ ಏನು ಮಾಡುತ್ತೀರಿ" ಎಂದು ಕೇಳಿದರು. ನಾನು ಕೆಲವು ಸ್ನೇಹಿತರು ಸಹಾಯ ಮಾಡುತ್ತಾರೆ ಎಂದು ಹೇಳಿದೆ. ಅದಕ್ಕೆ ಗುರುಗಳು ಬೇಕಾದರೆ ಉಪಾಧ್ಯಾಯರನ್ನು (ಗುರುಗಳ ಆಪ್ತ ಸಹಾಯಕರು) ಕೇಳಿ, ಹಣ ಕೊಡುತ್ತಾರೆ ಎಂದರು. ನಾನು ತಮ್ಮ

ಆಶೀರ್ವಾದ ಒಂದಿದ್ದರೆ ಸಾಕು ಎಂದೆ. ಏಕೆಂದರೆ ಒಂದುಸಲ ದುಡ್ಡು ಪಡೆದುಕೊಂಡರೆ, ಪ್ರತಿಬಾರಿಯೂ ಮಠದಿಂದಲೇ ಅಪೇಕ್ಷಿಸುವಂತೆ ಪ್ರಲೋಭನೆಯಾಗುತ್ತದೆ ಎಂದು.

ನಂತರ ಮೈಸೂರಿಗೆ ಬಂದೆ. ನಮ್ಮ ಮನೆಯಲ್ಲಿ ಇಂಡಿಯನ್ ಎಕ್ಸ್ಪ್ರೆಸ್ ತರಿಸುತ್ತಿದ್ದೆ. ಎದುರು ಮನೆಯಲ್ಲಿ ಪ್ರಜಾವಾಣಿ ತರಿಸುತ್ತಿದ್ದರು. ಇಬ್ಬರು ಬದಲಾಯಿಸಿಕೊಂಡು ಎರಡೂ ಪತ್ರಿಕೆಯನ್ನೂ ಓದುತ್ತಿದ್ದೆವು. ಕೇಂದ್ರ ಸರ್ಕಾರದಿಂದ "ಪ್ರೈಸ್ ಬಾಂಡ್" ಎಂದು ಹಣ ಬರುತ್ತಿತ್ತು. ಆ ಬಾರಿ ನನ್ನ ಹೆಸರಿಗೆ ೫೦೦ ರೂಗಳು ಬಂದವು. ಆ ಕಾಲದಲ್ಲಿ ಮುದ್ರಣ ಮಾಡಲು ೧೦೦೦ ರೂಗಳು ಬೇಕಾಗಿದ್ದವು. ಎಂ ಕೃಷ್ಣಮೂರ್ತಿ ಎಂಬ ನನ್ನ ಸ್ನೇಹಿತರು ಉಳಿದಿದ್ದಕ್ಕೆ ಸಹಾಯ ಮಾಡಿದರು. ನಂತರ ಪುಸ್ತಕವನ್ನು ಮುದ್ರಣಗೊಳಿಸಿ ೧೯೬೪ರಲ್ಲಿ ಮೊದಲ ಮುದ್ರಣ ಪ್ರಕಟಗೊಂಡಿತು.

ಗುರುಗಳು ಆ ಪುಸ್ತಕವನ್ನು ನೋಡಿ "ಚೆನ್ನಾಗಿ ಬರೆದಿದ್ದೀಯ, ಇದೇ ರೀತಿ ಶಂಕರಾಚಾರ್ಯರು ಮತ್ತು ವಿದ್ಯಾರಣ್ಯರ ಬಗ್ಗೆಯೂ ಬರೆ" ಎಂದು ನನಗೆ ಹರಸಿದರು. ಪುಸ್ತಕವನ್ನು ಯಾರಿಗೆ ಅರ್ಪಣೆ ಮಾಡುವುದು ಎಂದು ಯೋಚಿಸುತ್ತಿದ್ದಾಗ "ಯಾಕೆ ವಿದ್ಯಾತೀರ್ಥರು ಇಲ್ಲವೇನು?" ಎಂದು ಯಾರೋ ಹೇಳಿದಂತೆ ಆಯಿತು. ತಕ್ಷಣ ದೀಪ ಹಾಕಿ ಸುತ್ತಲೂ ನೋಡಿದೆ. ಯಾರೂ ಕಾಣಿಸಲಿಲ್ಲ. ಮನೆಯಲ್ಲೂ ಕೇಳಿದೆ "ಯಾರಾದರೂ ಬಂದಿದ್ದರೆ?" ಎಂದು. ಯಾರೂ ಇಲ್ಲವೆಂದರು. ಆಗ ನನಗೆ ಅರ್ಥವಾಯಿತು, ಶ್ರೀ ಚಂದ್ರಶೇಖರಭಾರತೀ ಸ್ವಾಮಿಗಳೇ ನನಗೆ ಪ್ರೇರಣೆ ನೀಡಿದ್ದಾರೆ ಎಂದು. ಹೀಗೆ ಇದೆ ನನ್ನ ಶೃಂಗೇರಿಯ ಒಡನಾಟ. ಈಗಾಗಲೇ ೪೦ ಪುಸ್ತಕವನ್ನು ಶೃಂಗೇರಿಯ ಕುರಿತಾಗಿ ಬರೆದಿದ್ದೇನೆ. ಇದೆಲ್ಲವುದಕ್ಕೂ ಗುರುಗಳ ಕೃಪೆಯೇ ಕಾರಣ.

*******************************

**ಹೆಚ್ ರಾಮು**

**ರವೀಂದ್ರ ನಗರ**

**ಶಿವಮೊಗ್ಗ**

ನಾನು ೧೯೩೫ನೇ ಇಸವಿಯಲ್ಲಿ ಶಿವಮೊಗ್ಗದಿಂದ ಮೂರು ಮೈಲಿ ದೂರವಿರುವ ಹರಕೆರೆಯೆಂಬ ಒಂದು ಹಳ್ಳಿಯಲ್ಲಿ ಇದ್ದೆ. ಆಗ ಚಂದ್ರಶೇಖರ ಭಾರತೀ ಸ್ವಾಮಿಗಳು ವಿಜಯಯಾತ್ರೆಯ ಸಲುವಾಗಿ ಹರಕೆರೆಗೆ ಬಂದಿದ್ದರು. ಸಣ್ಣ ಹಳ್ಳಿಯಾದರೂ ಇರುವ ಕೆಲವೇ ಮಂದಿ ಜನರು ಗುರುಗಳ ದರ್ಶನಕ್ಕೆ ಹೋಗಿದ್ದೆವು. ಆಗಿನ ಕಾಲದಲ್ಲಿ ಕಾರು ಇರಲಿಲ್ಲ. ಎತ್ತಿನಗಾಡಿಯಲ್ಲಿ ಬರುವಂತಿರಲಿಲ್ಲ. ಮೇನೆಯಲ್ಲಿ ಬಂದರು. ಅಲ್ಲಿ ಒಂದು ರಾಮೇಶ್ವರ ದೇವಸ್ಥಾನ ಇದೆ. ಅಲ್ಲಿಗೆ ಗುರುಗಳು ದಯಮಾಡಿಸಿದ್ದರು. ನನಗೆ ಆಗಿನ್ನೂ ಸಣ್ಣ ವಯಸ್ಸು. ಆದರೆ ನೆನಪಿನ ಶಕ್ತಿ ಚೆನ್ನಾಗಿ ಇತ್ತು. ನಾವುಗಳೆಲ್ಲ ಸಾಷ್ಟಾಂಗ ನಮಸ್ಕಾರವನ್ನು ಮಾಡಿದೆವು. ಗುರುಗಳು ಎಲ್ಲರಿಗೂ ಆಶೀರ್ವಾದವನ್ನು ಮಾಡಿ,

ಅಧ್ಯಾತ್ಮಿಕವಾದ ವಿಷಯಗಳನ್ನು ಮಾತ್ರ ಮಾತನಾಡಿದರು. ಹಿತೋಪದೇಶವನ್ನು ಸಹ ನೀಡಿದರು. ನಂತರ ಗುರುಗಳು "ನಿಮಗೆ ಏನು ಬೇಕು?" ಎಂದು ಕೇಳಲು, ನಮ್ಮ ಊರಿನ ಜನರೆಲ್ಲಾ, ತಮ್ಮ ಕಷ್ಟಗಳನ್ನು ಹೇಳಿಕೊಂಡರು. ಮಕ್ಕಳಿಗೆ ಉಪನಯನ ಮಾಡಲು ಸಹ ದುಡ್ಡಿಲ್ಲವೆಂದು ನುಡಿದರು. ಅದಕ್ಕೆ ಗುರುಗಳು "ಹಾಗಾದರೆ ನೀವೆಲ್ಲ ಶೃಂಗೇರಿಗೆ ಬನ್ನಿ, ಅಲ್ಲಿ ಉಪನಯನವನ್ನು ಮಾಡಿ ಹನ್ನೆರಡು ವರ್ಷ ವಿದ್ಯಾಭ್ಯಾಸವನ್ನು ಕಲಿಸುತ್ತೀವಿ, ಮುಂದೆ ನಿಮ್ಮ ಜೀವನವನ್ನು ನೀವು ರೂಪಿಸಿಕೊಳ್ಳಬಹುದು" ಎಂದರು. ಬಂದವರಿಗೆಲ್ಲ ಎರಡು ರೂಪಾಯಿ ಹಣವನ್ನು ಸಹ ನೀಡಿದರು. ಆಗಿನ ಎರಡು ರೂಪಾಯಿ, ಈಗಿನ ೩೦೦ ರೂಪಾಯಿಗೆ ಸಮಾನ. ಅದಾದ ನಂತರ ಗುರುಗಳು ಅಲ್ಲಿಂದ ನಾಲ್ಕು ಮೈಲಿ ದೂರದಲ್ಲಿರುವ ಹೊಸಹಳ್ಳಿಗೆ ತೆರಳಿದರು. ಅಲ್ಲಿ ಒಂದು ದಿವಸ ವಾಸ್ತವ್ಯ ಹೂಡಿ ಪೂಜೆಯನ್ನು ಮಾಡಿದರು. ಮಾರನೆಯ ದಿವಸ ಗಾಜನೂರಿನ ಮೂಲಕ ಶೃಂಗೇರಿಗೆ ಪ್ರಯಾಣ ಮಾಡಿದರು. ಅದೇ ಮೊದಲ ಸಲ ನಾನು ಗುರುಗಳ ದರ್ಶನವನ್ನು ಮಾಡಿದ್ದು.

ನಂತರ ೧೯೪೩ರಲ್ಲಿ ನಾವು ಶೃಂಗೇರಿಗೆ ಹೋಗಲೇಬೇಕೆಂದು ನಿರ್ಧರಿಸಿ ೧೦ ಜನರ ಗುಂಪು ಮಾಡಿಕೊಂಡು, ನಮ್ಮ ಬಳಿ ಹಣವಿಲ್ಲದ ಕಾರಣ ಶೃಂಗೇರಿಗೆ ನಡೆದುಕೊಂಡೇ ಹೋದೆವು. ಆಗ ನಮಗೆ ದಸರೆಯ ರಜೆ ಇತ್ತು. ಸುಮಾರು ಹದಿನೈದು ದಿವಸ ಶೃಂಗೇರಿಯಲ್ಲಿ ಇದ್ದೆವು. ಆದರೆ ಚಂದ್ರಶೇಖರ ಭಾರತೀ ಸ್ವಾಮಿಗಳು ಅಂತರ್ಮುಖರಾಗಿದ್ದ ಕಾರಣ ೧೫ ದಿವಸವೂ ಅವರ ದರ್ಶನ ಸಿಗಲಿಲ್ಲ. ಕಿರಿಯ ಗುರುಗಳಾದ ವಿದ್ಯಾತೀರ್ಥ ಸ್ವಾಮಿಗಳವರು ದಸರೆಯ ಉತ್ಸವ, ದರ್ಬಾರನ್ನು ನಡೆಸಿದರು. ಅದನ್ನು ನೋಡಿಕೊಂಡು ಪುನಃ ನಮ್ಮ ಊರಿಗೆ ತೆರಳಿದೆವು.

೧೯೫೪ನೇ ಇಸವಿಯಲ್ಲಿ ಮಹಾಲಯ ಅಮಾವಾಸ್ಯೆಯ ದಿವಸ ಶಿವಮೊಗ್ಗದಲ್ಲಿ ಡಂಗೂರ ಸಾರಿಕೊಂಡು ಹೋಗುತ್ತಿದ್ದರು, "ಜಗದ್ಗುರುಗಳಾದ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ತುಂಗಾ ನದಿಯಲ್ಲಿ ತಮ್ಮ ದೇಹತ್ಯಾಗ ಮಾಡಿದರು" ಎಂಬುದಾಗಿ. ನಾವೆಲ್ಲ ಬಸ್ಸು ಮಾಡಿಕೊಂಡು ೫೦ ಜನರ ತಂಡ ಶೃಂಗೇರಿಗೆ ಹೋದೆವು. ನಾವು ಶೃಂಗೇರಿ ತಲುಪುವ ಮೊದಲೇ ಗುರುಗಳ ಅಂತ್ಯಕ್ರಿಯೆಗಳೆಲ್ಲ ಮುಗಿದುಹೋಗಿದ್ದವು. ಎಡೆಬಿಡದೆ ಸುರಿಯುತ್ತಿದ್ದ ಮಳೆಯಿಂದ ನರಸಿಂಹವನದ ಒಳಗೆ ಹೋಗುವುದೇ ಕಷ್ಟವಾಯಿತು. ಈಗಿನ ಹಾಗೆ ಆಗ ಸೇತುವೆ ಇರಲಿಲ್ಲ. ಬಲು ಪ್ರಯಾಸದಿಂದ ನರಸಿಂಹವನವನ್ನು ತಲುಪಿದೆವು. ಗುರುಗಳ ಸಮಾಧಿಯ ಪ್ರದಕ್ಷಿಣೆ ಹಾಕಿ ಅಲ್ಲೇ ಕೆಲ ಹೊತ್ತು ಇದ್ದೆವು. ವಿಪರೀತ ಮಳೆ ಇದ್ದದ್ದರಿಂದ ಸಮಾಧಿಯ ಜಾಗವು ಬಹಳ ಕೆಸರಾಗಿತ್ತು. ಇಂದಿಗೂ ಶಿವಮೊಗ್ಗದ ಭೀಮೇಶ್ವರ ದೇವಸ್ಥಾನದಲ್ಲಿ ಪ್ರತಿ ವರ್ಷದ ಮಹಾಲಯ ಅಮಾವಾಸ್ಯೆಯಂದು ಗುರುಗಳ ಆರಾಧನೆ ನಡೆಯುತ್ತದೆ.

***************************

**ಕೃಷ್ಣಸ್ವಾಮಿ**
**ಬೆಂಗಳೂರು**

ನನಗೆ ಚಿಕ್ಕ ವಯಸ್ಸಿನಿಂದಲೂ ಅಧ್ಯಾತ್ಮದ ಕಡೆಗೆ ಒಲವಿತ್ತು ಮತ್ತು ಸಂನ್ಯಾಸಿಯಾಗುವ ಬಯಕೆ ಸಹ ಇತ್ತು. ನನ್ನ ಬಾಲ್ಯದಲ್ಲಿಯೇ ಸಂನ್ಯಾಸಿಯಾಗುವ ತೀವ್ರ ಆಕಾಂಕ್ಷೆಯಿಂದ ಮನೆಯಲ್ಲಿ ಯಾರಿಗೂ ಹೇಳದೆ ಶೃಂಗೇರಿಗೆ ಹೊರಟುಬಿಟ್ಟೆ. ಅಲ್ಲಿಗೆ ತಲುಪಿದ ನಂತರ ಏನು ಮಾಡುವುದೆಂದು ತಿಳಿಯದೆ, ಶಾರದಾಂಬಾ ದೇವಾಲಯದ ಎದುರು ನಿಂತಿರುವಾಗ, ಮಠದ ಸಿಬ್ಬಂದಿಯೋರ್ವರು ನನ್ನ ಬಳಿ ಬಂದು ಅಲ್ಲಿ ನಿಂತಿರುವ ಕಾರಣವೇನೆಂದು ಕೇಳಿದರು. ಆಗ ನಾನು ನನ್ನ ಉದ್ದೇಶವನ್ನು ತಿಳಿಸಿ, ಆ ಕಾರಣವಾಗಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನು ಭೇಟಿಯಾಗಬೇಕೆಂದು ಕೋರಿಕೊಂಡೆ. ಅದಕ್ಕವರು "ಗುರುಗಳು ಅಂತರ್ಮುಖರಾಗಿದ್ದು ಸದ್ಯಕ್ಕೆ ಯಾರಿಗೂ ಭೇಟಿಗೆ ಅವಕಾಶವಿಲ್ಲ" ವೆಂದು "ನಿಮಗೆ ಅದೃಷ್ಟವಿದ್ದರೆ ನರಸಿಂಹವನದಲ್ಲಿ ಅವರ ದರ್ಶನ ಸಿಗಬಹುದು ಪ್ರಯತ್ನಿಸಿ" ಎಂದು ಹೇಳಿದರು. ಅದೇ ರೀತಿ ನಾನು ನರಸಿಂಹವನಕ್ಕೆ ಹೋಗಿ ಗುರುಗಳ ದರ್ಶನಕ್ಕೆ ಕಾದು ಕುಳಿತೆ. ಅದಾದ ಕೆಲವು ಕ್ಷಣಗಳಲ್ಲಿಯೇ ಗುರುಗಳು ತಾವು ಇದ್ದ ಕೊಠಡಿಯಿಂದ ಹೊರಬಂದು ನನ್ನ ಕಡೆ ದೃಷ್ಟಿ ಹಾಯಿಸಿ ಒಮ್ಮೆ ಮಂದಹಾಸವನ್ನು ಬೀರಿ ಪುನಃ ತಾವು ಇದ್ದ ಕೊಠಡಿಗೆ ತೆರಳಿದರು.

ಅವರನ್ನು ಕಂಡು ರೋಮಾಂಚನಗೊಂಡ ನಾನು, ಮತ್ತೆ ಅವರ ದರ್ಶನ ಸಿಗಬಹುದೆಂದು ಕಾದು ಕುಳಿತೆ. ಎಷ್ಟು ಹೊತ್ತು ಕಾದರೂ ಅವರ ದರ್ಶನ ಮತ್ತೆ ಸಿಗದೇ ಇದ್ದದ್ದರಿಂದ, ನಾನು ಶಾರದಾಂಬಾ ದೇವಸ್ಥಾನದ ಬಳಿ ಬಂದೆ. ಆಗ ಮಠದ ಸಿಬ್ಬಂದಿಯೇ ನನ್ನ ಬಳಿ ಬಂದು ಉಳಿದುಕೊಳ್ಳುವುದಕ್ಕೆ ವ್ಯವಸ್ಥೆ ಮಾಡಿ ಪುನಃ ಭೇಟಿಯಾಗುವುದಾಗಿ ಹೇಳಿ ಹೊರಟರು. ಮರುದಿನ ನನ್ನ ಬಳಿ ಬಂದ ಅವರು, ಮನೆಯಲ್ಲಿ ಹೇಳದೆ ಬಂದಿರುವ ಕಾರಣ ಸಂನ್ಯಾಸವನ್ನು ನೀಡಲು ಸಾಧ್ಯವಿಲ್ಲ, ಮೊದಲು ನಿಮ್ಮ ತಂದೆ–ತಾಯಿಗಳನ್ನು ಕರೆಸಿ ಎಂದು ಹೇಳಿದರು. ನಾನು ಮನೆಯಲ್ಲಿ ಹೇಳಿ ಬಂದಿರದ ವಿಷಯವನ್ನು ಅವರ ಬಳಿ ಹೇಳಿರಲಿಲ್ಲವಾದ್ದರಿಂದ ಅವರ ಮಾತು ನನಗೆ ಆಶ್ಚರ್ಯ ಉಂಟುಮಾಡಿತು.

ನಾನು ನನ್ನ ತಂದೆಯವರಿಗೆ ಪತ್ರ ಬರೆದು ಶೃಂಗೇರಿಯಲ್ಲಿ ಇರುವ ವಿಷಯವನ್ನು ತಿಳಿಸಿ ಅಲ್ಲಿಗೆ ಬರಲು ಕೇಳಿಕೊಂಡೆ. ಅದಾದ ಒಂದು ವಾರದೊಳಗೆ ನನ್ನ ತಂದೆ ತಾಯಿಗಳು ಶೃಂಗೇರಿಗೆ ಬಂದರು. ನಂತರ ಮಠದ ಸಿಬ್ಬಂದಿ ನನ್ನನ್ನು, ನನ್ನ ತಂದೆ ತಾಯಿಗಳ ಜೊತೆ ಕೂರಿಸಿಕೊಂಡು, "ತಂದೆ ತಾಯಿಗಳಿಗೆ ನೋವು ಕೊಟ್ಟು ಸಂನ್ಯಾಸ ದೀಕ್ಷೆ ತೆಗೆದುಕೊಳ್ಳುವುದು ತಪ್ಪು, ಆದ್ದರಿಂದ ಸಂನ್ಯಾಸಿಯಾಗುವ ಆಸೆಯನ್ನು ಬಿಟ್ಟು ಲೌಕಿಕ ಜೀವನವನ್ನು ನಡೆಸಿ" ಎಂದು ಬುದ್ಧಿವಾದ ಹೇಳಿದರು. ಗುರುಗಳ ಕೃಪೆ ನಿಮ್ಮ ಮೇಲೆ ಇದೆ, ನಿಮಗೆ ಶ್ರೇಯಸ್ಸು ಉಂಟಾಗುತ್ತದೆ ಎಂದು ಹರಸಿದರು. ನಂತರ

ನಾನು ಅವರ ಮಾತಿಗೆ ಒಪ್ಪಿ ತಂದೆ ತಾಯಿಗಳ ಜೊತೆಗೆ ಹೊರಟೆ. ನಾನು ಹೆಚ್ಚು ವಿದ್ಯಾಭ್ಯಾಸ ಮಾಡದಿದ್ದರೂ, ಅವರು ನುಡಿದಂತೆ ಒಳ್ಳೆಯ ಹುದ್ದೆಯನ್ನೇರಿದೆ. ಇದೆಲ್ಲ ಗುರುಗಳ ಕೃಪೆಯಿಂದಲೇ ಆದದ್ದು ಎಂದು ನನ್ನ ದೃಢವಾದ ನಂಬಿಕೆ. ಗುರುಗಳೇ ನಾನು ಮನೆಯಲ್ಲಿ ಹೇಳದೇ ಬಂದಿರದ ವಿಷಯವನ್ನು ಮಠದ ಸಿಬ್ಬಂದಿಗೆ ಹೇಳಿದ್ದರು ಎಂದು ನನಗೆ ಆಮೇಲೆ ತಿಳಿದು ಬಂತು, ಮತ್ತು ಆ ಸಿಬ್ಬಂದಿ ಸಂಸ್ಕೃತ ಪಾಠಶಾಲೆಯ ಪ್ರಾಂಶುಪಾಲರು ಎಂಬುದಾಗಿ ನನ್ನ ನೆನಪು.

******************************

**ಶ್ರೀಧರಮೂರ್ತಿ**
**ರಾಮಕೃಷ್ಣ ನಗರ, ಮೈಸೂರು**

ಚಿಕ್ಕಮಗಳೂರು ಜಿಲ್ಲೆಯ ಬೆಳವಾಡಿ ನಮ್ಮ ಮೂಲ ಸ್ಥಳ. ನಮ್ಮ ಪೂರ್ವಿಕರು ಅಲ್ಲೇ ನೆಲೆಸಿದ್ದರು. ಅನುಕೂಲಸ್ಥರಾಗಿದ್ದ ನಮ್ಮ ಪೂರ್ವಿಕರು ಜಗದ್ಗುರು ಉಗ್ರ ನರಸಿಂಹ ಭಾರತೀ ಸ್ವಾಮಿಗಳ ಕಾಲದಲ್ಲಿ ೧೦೦ ಅಂಕಣದ ಮನೆಯೊಂದನ್ನು ಶ್ರೀ ಮಠಕ್ಕೆ ಅರ್ಪಿಸಿದ್ದರು. ನಂತರ ಮಾಚೇನಹಳ್ಳಿಯಲ್ಲಿ ಮನೆಕಟ್ಟಿಕೊಂಡು ವಾಸ ಮಾಡುತ್ತಿದ್ದರು. ಅಂದಿನಿಂದಲೂ ನಮ್ಮ ಮನೆತನಕ್ಕೆ ಶೃಂಗೇರಿಯ ಗುರುಪರಂಪರೆಯ ಒಡನಾಟ ಇದೆ. ಬೆಳವಾಡಿಯ ಸುಪ್ರಸಿದ್ಧ ಉದ್ಭವ ಗಣಪತಿ ದೇವಸ್ಥಾನದ ಉದ್ಭವ ಗಣಪತಿಯನ್ನು ಗುರುತಿಸಿದವರೇ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು.

ನಮ್ಮ ತಂದೆ ಸುಬ್ಬಣ್ಣಯ್ಯರವರು ಬೆಳವಾಡಿ ಪಟೇಲರಾಗಿದ್ದರು. ಬೆಳವಾಡಿ ಪಟೇಲರು ಎಂದೇ ಹೆಸರಾಗಿದ್ದರು. ಬೆಳವಾಡಿ ಬಸ್ ನಿಲ್ದಾಣದ ಬಳಿಯೇ ನಮ್ಮ ಮನೆ ಇತ್ತು. ನಮ್ಮ ಮನೆಯ ಎದುರಿಗೆ ಮಠದ ಮನೆ ಇತ್ತು. ನಮ್ಮ ತಂದೆಯವರು ತುಂಬಾ ಸೌಮ್ಯ ಸ್ವಭಾವದವರಾಗಿದ್ದರು. ಮಿತಭಾಷಿಯಾಗಿದ್ದು ಜಗದ್ಗುರುಗಳ ಮೇಲೆ ಅಚಲ ಭಕ್ತಿಯನ್ನು ಇಟ್ಟುಕೊಂಡಿದ್ದರು. ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಬೆಳವಾಡಿಗೆ ಬಂದ ಸಂದರ್ಭದಲ್ಲಿ ನಮ್ಮ ಮನೆಯ ಎದುರಿರುವ ಮಠದ ಮನೆಯಲ್ಲಿಯೇ ವಾಸ್ತವ್ಯ ಹೂಡಿದ್ದರು. ಹೀಗಾಗಿ ನಮ್ಮ ತಂದೆಯವರಿಗೆ ಗುರುಗಳ ಸೇವೆ ಮಾಡುವ ಪುಣ್ಯ ದೊರೆತಿತ್ತು. ನಿಷ್ಕಲ್ಮಷವಾಗಿ ಗುರುಗಳ ಸೇವೆಯನ್ನು ಮಾಡುತ್ತಿದ್ದ ನಮ್ಮ ತಂದೆಯವರ ಗುಣಗಳನ್ನು ಗುರುಗಳು ಬಹಳವಾಗಿ ಮೆಚ್ಚಿಕೊಂಡಿದ್ದರು.

ಗುರುಗಳು ಧರ್ಮಾಚರಣೆ ಮಾಡುವ ಯಾರೇ ಆಗಲಿ, ಅವರ ಮೇಲೆ ಬಹಳ ಪ್ರೀತಿ ತೋರಿಸುತ್ತಿದ್ದರು. ಅದು ಎಷ್ಟರ ಮಟ್ಟಿಗೆ ಅಂದರೆ ಒಮ್ಮೆ ನಮ್ಮ ಮನೆ ಬಳಿಯೇ ಒಂದು "ಪಟೇಲರ ಸೋಪಾನ" ಎಂಬ ನಮ್ಮ ವಂಶಸ್ಥರೇ ಕಟ್ಟಿಸಿದ್ದ ಒಂದು ಸ್ಥಳವಿದ್ದು, ಅಲ್ಲಿಗೆ ನಮ್ಮ ತಂದೆಯವರು ಸ್ನಾನಕ್ಕೆ ಹೋಗಿದ್ದರು, ಅಲ್ಲಿಂದ ವಾಪಸ್ಸು ಬರಲು ಅರ್ಧ

ಗಂಟೆಯಾಯಿತು. ಆಗ ಗುರುಗಳು ಹೊರಡುವ ಸಮಯವಾಗಿತ್ತು. ನಮ್ಮ ತಂದೆಯವರು ಸ್ನಾನ ಮುಗಿಸಿಕೊಂಡು ಬರುವವರೆಗೂ ಇದ್ದು ಫಲಮಂತ್ರಾಕ್ಷತೆ ನೀಡಿದ್ದರು. ನಮ್ಮೂರಿನ ಕೆರೆ ಒಡೆದಾಗಲೂ ಗುರುಗಳು ನಮ್ಮ ತಂದೆಯವರನ್ನು ಕರೆಸಿಕೊಂಡು ಏನು ಮಾಡಬೇಕು ಎಂದು ಹೇಳಿದ್ದರು.

ಶೃಂಗೇರಿಯವರಾದ ಶಾಮಭಟ್ಟರು, ಮೂರನೇ ಮನೆ ರಾಮಭಟ್ಟರು, ಸಾಮಕ ಗಣೇಶ ಶಾಸ್ತ್ರಿಗಳು, ಸಾಮಕ ಸುಬ್ರಹ್ಮಣ್ಯ ಶಾಸ್ತ್ರಿಗಳು, ಇವರೆಲ್ಲರೂ ನಮ್ಮ ತಂದೆಯವರ ಸ್ನೇಹಿತರಾಗಿದ್ದರು. ಹೀಗಾಗಿ ನಮ್ಮ ಮನೆಗೆ ಅವರು ಬರುವುದು, ನಮ್ಮ ತಂದೆ ಶೃಂಗೇರಿಗೆ ಹೋಗುವುದು ನಡೆಯುತ್ತಲೇ ಇತ್ತು. ಹೀಗೆ ಒಮ್ಮೆ ನಮ್ಮ ತಂದೆಯವರು ನಮ್ಮ ತಾಯಿ ಮತ್ತು ದೊಡ್ಡಣ್ಣನನ್ನು ಕರೆದುಕೊಂಡು ಶೃಂಗೇರಿಗೆ ಹೋಗಿದ್ದರು. ಆಗ ಚಂದ್ರಶೇಖರ ಭಾರತೀ ಸ್ವಾಮಿಗಳು ನರಸಿಂಹವನದಲ್ಲಿ ಅಂತರ್ಮುಖರಾಗಿ ಮೂರು ತಿಂಗಳು ಆಯಿತು ಎಂಬುದಾಗಿ ತಿಳಿದುಬಂತು. ಯಾರಿಗೂ ದರ್ಶನ ಸಿಗುತ್ತಿರಲಿಲ್ಲ. ನಮ್ಮ ತಂದೆಯವರು ಗುರುಗಳ ದರ್ಶನ ಸಿಗುವುದಿಲ್ಲವಲ್ಲಾ ಎಂದು ಬಹಳ ಬೇಸರ ಮಾಡಿಕೊಂಡಿದ್ದರು.

ನಮ್ಮ ತಂದೆಯವರು, ಕೆಳಗಡೆ ಬಂದು ನದಿಯಲ್ಲಿ ಸ್ನಾನ ಮಾಡುತ್ತಿದ್ದರು. ಅಷ್ಟರಲ್ಲಿ ಒಬ್ಬ ಪರಿಚಾರಕರು ಬಂದು "ಬೆಳವಾಡಿಯಿಂದ ಯಾರೋ ಬಂದಿದ್ದಾರೆ ಅವರನ್ನು ಕರೆದುಕೊಂಡು ಬಾ" ಎಂದು ಗುರುಗಳು ಕಳಿಸಿದ್ದಾರೆ ಎಂದು ನುಡಿದರು. ಮೂರು ತಿಂಗಳಿನಿಂದ ಅಂತರ್ಮುಖರಾಗಿ ಕೊಠಡಿಯ ಒಳಗೆ ಸಮಾಧಿ ಸ್ಥಿತಿಯಲ್ಲಿದ್ದ ಗುರುಗಳಿಗೆ ಅದು ಹೇಗೆ ನಮ್ಮ ತಂದೆಯವರು ಬಂದ ವಿಷಯ ಗೊತ್ತಾಯಿತು? ಎಂದು ಆಶ್ಚರ್ಯವಾಗಬಹುದು, ಆದರೆ ಗುರುಗಳ ತಪಃ ಶಕ್ತಿಯನ್ನು ಕೇಳಿ ತಿಳಿದಿದ್ದ ನಮ್ಮ ತಂದೆಗೆ ಅದು ಸಹಜವೆನಿಸಿತು. ಬಹಳ ಹರ್ಷದಿಂದ ನಮ್ಮ ತಂದೆಯವರು ಗುರುಗಳ ದರ್ಶನಕ್ಕೆ ಹೋದರು. ಗುರುಗಳು ಬಂದ ವಿಷಯವನ್ನು ವಿಚಾರಿಸಿದರು. ನಮ್ಮ ತಂದೆಯವರು ತಮ್ಮ ದರ್ಶನ ಮಾಡಲು ಬಂದಿರುವುದಾಗಿ ಹೇಳಿದರು. ಅದಕ್ಕೆ ಗುರುಗಳು "ಚಂದ್ರಮೌಳೀಶ್ವರ ನಿಮಗೆ ಒಳ್ಳೆಯದನ್ನು ಮಾಡುತ್ತಾನೆ" ಎಂದು ಹರಸಿ ಪುನಃ ವಾಪಸ್ಸು ಒಳಗೆ ಹೋದರು.

ಇದಾದ ಕೆಲವು ದಿನಗಳ ಬಳಿಕ ಗುರುಗಳು ಬಹಿರ್ಮುಖರಾಗಿದ್ದಾಗ ನಮ್ಮ ತಂದೆಯವರು ಮತ್ತೆ ಗುರುಗಳ ದರ್ಶನಕ್ಕೆ ಹೋಗಿದ್ದರು. ಆಗ ಗುರುಗಳೇ “ಏನು ಬೇಕು?” ಎಂದು ನಮ್ಮ ತಂದೆಯವರಿಗೆ ಕೇಳಿದರು. ಅದಕ್ಕೆ ನಮ್ಮ ತಂದೆಯವರು "ನಿಮ್ಮ ಅನುಗ್ರಹದಿಂದ ಎಲ್ಲವೂ ಅನುಕೂಲಕರವಾಗಿದ್ದು, ತಮ್ಮ ಪಾದುಕೆಯನ್ನು ನೀಡಿದರೆ ಕೃತಾರ್ಥನಾಗುತ್ತೇನೆ" ಎಂದು ಹೇಳಿದರು. ಗುರುಗಳು ಪಾದುಕೆಯ ಜೊತೆಗೆ ಶಾಲನ್ನು

ಸಹ ಅನುಗ್ರಹಿಸಿದರು. ಗುರುಗಳ ಪಾದುಕೆ ಮತ್ತು ಅವರ ಕೈಯಿಂದ ಶಾಲನ್ನು ಪಡೆದ ನಾವೇ ಧನ್ಯರು. ಆ ಪಾದುಕೆಗೆ ನಮ್ಮ ಮನೆಯಲ್ಲಿ ಪ್ರತಿದಿನವೂ ಪೂಜೆ ನಡೆಯುತ್ತವೆ. ಪ್ರತಿ ಮಹಾಲಯ ಅಮಾವಾಸ್ಯೆಯಂದು ಚಂದ್ರಶೇಖರ ಭಾರತೀ ಸ್ವಾಮಿಗಳ ಆರಾಧನೆಯನ್ನು ಮಾಡುತ್ತೇವೆ.

******************************

**ಚಿದಂಬರ್**

**ಬೆಂಗಳೂರು**

ನಾವು ಶೃಂಗೇರಿಯಲ್ಲಿ ೧೯೪೩ ರಿಂದ ೧೯೪೭ರ ವರೆಗೆ ಇದ್ದೆವು. ದೊಡ್ಡ ಪೇಟೆ ಬೀದಿಯಲ್ಲಿ ನಮ್ಮ ಮನೆ ಇತ್ತು. ನಮ್ಮ ತಂದೆ ಚಂದ್ರಶೇಖರ ಭಾರತೀ ಸ್ವಾಮಿಗಳ ಜೊತೆ ಸೇವೆ ಮಾಡಿಕೊಂಡು ಇದ್ದರು. ನನ್ನ ಚಿಕ್ಕ ವಯಸ್ಸಿನಲ್ಲೇ ನಮ್ಮ ತಂದೆ ತೀರಿಕೊಂಡುಬಿಟ್ಟರು. ನನಗೆ ಉಪನಯನವಾಗಿರದಿದ್ದ ಕಾರಣ ನಮ್ಮ ಮನೆಯಲ್ಲಿ ನನ್ನನ್ನು ಹೆಚ್ಚಾಗಿ ಮಠಕ್ಕೆ ಕರೆದುಕೊಂಡು ಹೋಗುತ್ತಿರಲಿಲ್ಲ. ನಮ್ಮ ಚಿಕ್ಕಪ್ಪನೇ ನನ್ನ ಉಪನಯನವನ್ನು ಮಾಡಿದರು. ಶಾರದಾಂಬಾ ದೇವಸ್ಥಾನದ ಪಕ್ಕದಲ್ಲಿರುವ ಬ್ರಹ್ಮದೇವರ ದೇವಸ್ಥಾನದ ಪೂಜೆಯನ್ನು ನಮ್ಮ ಮನೆಯವರೇ ಮಾಡುತ್ತಿದ್ದದ್ದು. ನನಗೆ ಉಪನಯನವಾಗಿರಲಿಲ್ಲವಾದ್ದರಿಂದ ನಾನು ಅಲ್ಲಿ ಪೂಜೆ ಮಾಡಿಲ್ಲ. ಆದರೆ ವಾರಕ್ಕೊಮ್ಮೆ ದೇವಸ್ಥಾನಕ್ಕೆ ಹೋಗುತ್ತಿದ್ದೆ. ಗುರುಗಳ ದರ್ಶನ ಹೆಚ್ಚಾಗಿ ಸಿಗುತ್ತಿರಲಿಲ್ಲ. ಒಂದೆರಡು ಬಾರಿ ಅವರ ಮಾತನ್ನು ಕೇಳಿದ್ದೇನೆ, ಬಹಳ ಮೃದುವಾಗಿ ಮಾತನಾಡುತ್ತಿದ್ದರು.

**ಚಿದಂಬರ್ ರವರ ಶ್ರೀಮತಿ**

**ಬೆಂಗಳೂರು**

ನಮ್ಮ ತಾಯಿಯ ತವರುಮನೆ ಶೃಂಗೇರಿ. ನಾವು ಚಿಕ್ಕ ವಯಸ್ಸಿನಲ್ಲಿ ಇದ್ದಾಗ ನಮ್ಮ ಸೋದರಮಾವ ನನ್ನನ್ನು ಅಮ್ಮನವರ ದರ್ಶನಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಗುರುಗಳು ಹೊಳೆದಾಟಿ ದೋಣೀಲಿ ಬರುತ್ತಿದ್ದರು. ಈಗಿನ ಹಾಗೆ ಆ ಕಾಲದಲ್ಲಿ ಸೇತುವೆ ಇರಲಿಲ್ಲ. ಚಂದ್ರಶೇಖರ ಭಾರತೀ ಸ್ವಾಮಿಗಳು ಮತ್ತು ವಿದ್ಯಾತೀರ್ಥ ಸ್ವಾಮಿಗಳು ಇಬ್ಬರೂ ಬರುತ್ತಿದ್ದರು. ನವರಾತ್ರಿಯಲ್ಲಿ ಗಂಗೆ ಪೂಜೆ ಮಾಡುತ್ತಿದ್ದರು. ಚಂದ್ರಶೇಖರ ಭಾರತೀ ಸ್ವಾಮಿಗಳು ಮಾತನಾಡುತ್ತಿರಲಿಲ್ಲ. ಮಾತನಾಡಿಸಬೇಕೆನಿಸಿದರೆ ಅವರೇ ಮಾತನಾಡಿಸುತ್ತಿದ್ದರು. ಇಬ್ಬರು ಗುರುಗಳು ಚಂದ್ರಮೌಳೀಶ್ವರನ ಪೂಜೆಗೆ ಕೂರುತ್ತಿದ್ದರು. ಅದನ್ನು ನೋಡಲು ಎರಡು ಕಣ್ಣು ಸಾಲದು. ಶಂಕರ ಜಯಂತಿ ದಿವಸ ಗುರುಗಳು ವ್ಯಾಖ್ಯಾನ ಮಾಡುತ್ತಿದ್ದರು. ಮಳೆಗಾಲದಲ್ಲಿ ಗುರುಗಳು ಚಂದ್ರಮೌಳೀಶ್ವರನ ತೊಟ್ಟಿಯಲ್ಲಿ ಇರುತ್ತಿದ್ದರು.

ನಮ್ಮನೆ ಪದ್ಧತಿಯಂತೆ ಮಡಿಯಲ್ಲಿ ನನ್ನನ್ನು ಮಠಕ್ಕೆ ಕರೆದುಕೊಂಡು ಹೋಗುತ್ತಿದ್ದರು.

ಗುರುಗಳು ನಮ್ಮ ತಾಯಿಗೆ ಪ್ರಸಾದವಾಗಿ ಒಂದು ಗುಲಾಬಿ ಹೂವನ್ನು ಕೊಟ್ಟಿದ್ದರು. ಅದನ್ನು ನಮ್ಮ ತಾಯಿಯವರು, ಅವರು ಬದುಕಿರುವವರೆಗೂ ದೇವರ ಮನೆಯಲ್ಲಿ ಇಟ್ಟು ಪೂಜೆ ಮಾಡುತ್ತಿದ್ದರು. ನಮ್ಮ ತಂದೆಯವರು ಕ್ಷೇತ್ರಪಾಲನ ದೇವಸ್ಥಾನದಲ್ಲಿ ಪೂಜೆ ಮಾಡುತ್ತಿದ್ದರು. ಹುಣ್ಣಿಮೆ ಪೂಜೆಯ ಸಲುವಾಗಿ ನಮ್ಮ ತಂದೆ ಗುರುಗಳೊಡನೆ ಚರ್ಚಿಸಲು ಹೋಗುತ್ತಿದ್ದರು. ಆಗ ನನ್ನನ್ನೂ ಕರೆದುಕೊಂಡು ಹೋಗುತ್ತಿದ್ದರು. ಗುರುಗಳು ಯಾವಾಗಲು ಕೇವಲ ಅಧ್ಯಾತ್ಮ ವಿಷಯಗಳ ಬಗ್ಗೆಯೇ ಮಾತನಾಡುತ್ತಿದ್ದರು.

ನಾನು ಶಿವಮೊಗ್ಗದಲ್ಲಿ ಇಂಟರ್ಮೀಡಿಯೇಟ್ ಓದಿದೆ. ರಜಾದಿನದಂದು ಶೃಂಗೇರಿಗೆ ಹೋದಾಗ ಅಲ್ಲಿ ರುದ್ರಹೋಮ ನಡೆದಿತ್ತು. ಪೂರ್ಣಾಹುತಿಯ ಹೊತ್ತಿಗೆ ಒಮ್ಮೆ ಗುರುಗಳು ತಾವು ಇದ್ದ ಕೊಠಡಿಯ ಕಿಟಕಿಯಿಂದಲೇ ದರ್ಶನ ನೀಡಿದ್ದರು. ನರಸಿಂಹವನದಲ್ಲಿ ಒಂದು ರುದ್ರಾಕ್ಷಿ ಮರ ಇತ್ತು. ಆ ಮರದಿಂದ ಬೀಳುವ ಹೂವನ್ನು ಆರಿಸಿಕೊಂಡು ಬರುವುದಕ್ಕೆ ನಾನು ಹೋಗುತ್ತಿದ್ದೆ. ಆಗ ಒಂದೆರಡು ಬಾರಿ ಗುರುಗಳ ದರ್ಶನವು ಅಗಿತ್ತು. ಭಕ್ತರೆಲ್ಲರೂ ಗುರುಗಳ ದರ್ಶನಕ್ಕೆ ಕಾದು ನಿಂತಿರುತ್ತಿದ್ದರು. ಆದರೆ ಗುರುಗಳು ಯಾವಾಗಲೋ ಒಮ್ಮೊಮ್ಮೆ ಕಾಣಿಸಿಕೊಳ್ಳುತ್ತಿದ್ದರು. ಮಠದ ಸಿಬ್ಬಂದಿ ಗುರುಗಳ ದರ್ಶನ ಸಿಗುವುದಿಲ್ಲವೆಂದರೂ, ಜನಗಳು ಕಾದು ನಿಲ್ಲುತ್ತಿದ್ದರು. ನಾನು ಒಂದೆರಡು ಬಾರಿ ಗುರುಗಳು ಅಂತರ್ಮುಖರಾಗಿ ಅವಧೂತ ಸ್ಥಿತಿಯಲ್ಲಿ ಇರಬೇಕಾದರೂ ಅವರ ದರ್ಶನವನ್ನು ಮಾಡಿದ್ದು ಉಂಟು. ಚಂದ್ರಶೇಖರ ಭಾರತೀ ಸ್ವಾಮಿಗಳನ್ನು ನೋಡಿದ ನಾವೇ ಭಾಗ್ಯವಂತರು.

*******************************

## ಸತ್ಯನಾರಾಯಣ ಭಟ್ಟರು
## ತರೀಕೆರೆ

ನಾವು ಮೂಲತಃ ಭುವನಕೋಟೆಯವರು. ಈಗ ತರೀಕೆರೆಯಲ್ಲಿ ನೆಲೆಸಿದ್ದೇವೆ. ನಮ್ಮ ಅಜ್ಜ ಶಿವರಾಮ ಭಟ್ಟರು ಶೃಂಗೇರಿಯಲ್ಲಿ ವೇದಾಭ್ಯಾಸ ಮಾಡುತ್ತಿದ್ದರು ಮತ್ತು ಜಗದ್ಗುರು ಶ್ರೀ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಸಮಕಾಲೀನರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಜಗದ್ಗುರುಗಳಾದ ಹೊಸದರಲ್ಲಿ ಇನ್ನೂ ಶಾಸ್ತ್ರಾಧ್ಯಯನ ನಡೆಸುತ್ತಿದ್ದರು. ಆ ಸಂದರ್ಭದಲ್ಲಿ ನಮ್ಮ ಅಜ್ಜನೂ ಸಹ ಅಲ್ಲಿ ವಿದ್ಯಾರ್ಥಿಯಾಗಿದ್ದರಿಂದ ಜಗದ್ಗುರುಗಳನ್ನು ಹತ್ತಿರದಿಂದ ಕಾಣುವ ಭಾಗ್ಯ ದೊರಕಿತ್ತು. ಗುರುಗಳು ಅಧ್ಯಯನದ ಸಮಯದಲ್ಲಿ ನಮ್ಮ ಅಜ್ಜನನ್ನು ಮಾತನಾಡಿಸುತ್ತಿದ್ದರಿಂದ ಗುರುಗಳಿಗೆ ನಮ್ಮ ಅಜ್ಜನ ಪರಿಚಯವಿತ್ತು. ನಂತರದ ದಿನಗಳಲ್ಲಿ ನಮ್ಮ ಅಜ್ಜ ತರೀಕೆರೆಯಲ್ಲಿ ವಾಸಮಾಡುತ್ತಿದ್ದರು.

ನಮ್ಮ ಅಜ್ಜ ಒಮ್ಮೆ ಗುರುಗಳ ದರ್ಶನ ಮಾಡಲು ಶೃಂಗೇರಿಗೆ ಹೋಗಿದ್ದರು. ಆಗ

ಗುರುವರ್ಯರು ಅಂತರ್ಮುಖರಾಗಿದ್ದ ಕಾರಣ ಯಾರಿಗೂ ದರ್ಶನ ಸಾಧ್ಯವಿಲ್ಲ ಎಂದು ಮಠದ ಸಿಬ್ಬಂದಿಗಳು ಹೇಳಿದರು. ದರ್ಶನ ಸಾಧ್ಯವಿಲ್ಲವೆಂದದ್ದರಿಂದ ಸಹಜವಾಗಿ ನಮ್ಮ ಅಜ್ಜನಿಗೆ ಬೇಸರವಾಯಿತು. ಆದರೆ ಆಶ್ಚರ್ಯವೆಂಬಂತೆ, ಒಬ್ಬ ಪರಿಚಾರಕರು ಬಂದು "ಇಲ್ಲಿ ಶಿವರಾಮ ಭಟ್ಟರು ಎಂದರೆ ಯಾರು?" ಎಂದು ಕೇಳಿದರು. ಆಗ ನಮ್ಮ ಅಜ್ಜ, "ಅದು ನಾನೇ" ಎನ್ನಲು ಆ ಪರಿಚಾರಕರು "ಜಗದ್ಗುರುಗಳು ಕರೆಯುತ್ತಿದ್ದಾರೆ, ಬರಬೇಕಂತೆ" ಎಂದು ತಿಳಿಸಿದರು. ನಮ್ಮ ಅಜ್ಜನಿಗೆ ಪರಮಾನಂದವಾಯಿತು. ತಕ್ಷಣ ಪರಿಚಾರಕರನ್ನು ಹಿಂಬಾಲಿಸುತ್ತ ನಮ್ಮ ಅಜ್ಜ ಗುರುಗಳು ಇದ್ದ ನರಸಿಂಹವನಕ್ಕೆ ಬಂದರು. ಗುರುಗಳು ನಮ್ಮ ಅಜ್ಜನನ್ನು ಮಾತನಾಡಿಸಿ ಆಶೀರ್ವದಿಸಿದ್ದಲ್ಲದೆ, ಪಾದುಕೆ ಮತ್ತು ಒಂದು ಸಾಲಿಗ್ರಾಮವನ್ನು ಅನುಗ್ರಹಿಸಿದರು. ನಮ್ಮ ಅಜ್ಜ ಅವೆರಡೂ ಪ್ರಸಾದವನ್ನು ಸ್ವೀಕರಿಸಿ ಗುರುಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಹರ್ಷಚಿತ್ತರಾಗಿ ಹಿಂದಿರುಗಿದರು. ಅಂದಿನಿಂದಲೂ ನಮ್ಮ ಮನೆಯಲ್ಲಿ ಗುರುಗಳ ಪಾದುಕೆಗೆ ಪ್ರತಿ ದಿವಸವೂ ತಪ್ಪದೆ ಪೂಜೆ ನಡೆಸಿಕೊಂಡು ಬರುತ್ತಿದ್ದೇವೆ. ಹೀಗೆ ಗುರುಗಳು ತಮ್ಮ ಭಕ್ತರಿಗೆ ಒಮ್ಮೊಮ್ಮೆ ಅನಿರೀಕ್ಷಿತವಾಗಿ ಈ ರೀತಿ ಅನುಗ್ರಹಿಸುತ್ತಿದ್ದರಂತೆ.

******************************

**ವಿಶ್ವನಾಥ ಭಟ್ಟರು**
**ಮಹಾಬಲ ಭಟ್ಟರ ಮಗ**
**(ಗುರುಗಳ ದೇಹವನ್ನ ನದಿಯಿಂದ ದಡಕ್ಕೆ ತಂದ ಪರಿಚಾರಕರು)**
**ಅಪ್ಪಾಜೀರಾವ್ ಕಾಂಪೌಂಡ್, ಶಿವಮೊಗ್ಗ**

ನಾವು ಮೂಲತಃ ಶೃಂಗೇರಿಯವರೇ. ನಮ್ಮ ಅಜ್ಜನ ಹೆಸರು ಕವಿ ರಾಮಭಟ್ಟರು ಎಂದು. ಅವರ ಕಾಲದಿಂದಲೂ ಮಠದಲ್ಲಿ ಗುರುಗಳ ಸೇವೆಯನ್ನು ಮಾಡಿಕೊಂಡು ಬರುತ್ತಿದ್ದರು. ನಮ್ಮ ತಂದೆಯವರಾದ ಕವಿ ಮಹಾಬಲಭಟ್ಟರು ೧೯೨೦ ರಲ್ಲಿ ಹುಟ್ಟಿದರು. ಅವರು ೧೯೩೭ ರಿಂದ ೧೯೭೬ ರವರೆಗೆ ಶೃಂಗೇರಿ ಮಠದಲ್ಲಿ ಪರಿಚಾರಿಕೆ ಮಾಡಿಕೊಂಡಿದ್ದರು. ನಮ್ಮ ತಂದೆ ಸುಮಾರು ೧೮ ವರ್ಷ ವಯಸ್ಸಿನವರಾಗಿದ್ದಾಗ ಮಠದ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಯನ ಮಾಡುತ್ತಿದ್ದರು. ನಮ್ಮ ತಂದೆಯವರು ಚುರುಕು ಬುದ್ಧಿಯವರಲ್ಲದ ಕಾರಣ ಸಹಪಾಠಿಗಳೆಲ್ಲಾ ಛೇಡಿಸುವುದು, ಹೊಡೆಯುವುದು ಎಲ್ಲಾ ಮಾಡುತ್ತಿದ್ದರು. ಒಮ್ಮೆ ಶಾರದಾಂಬಾ ದೇವಾಲಯದ ಬಳಿ ನಡೆದುಕೊಂಡು ಬರುತ್ತಿದ್ದ ಚಂದ್ರಶೇಖರ ಭಾರತೀ ಸ್ವಾಮಿಗಳು ಅದನ್ನು ಗಮನಿಸಿ ಅಲ್ಲಿದ್ದವರಿಗೆ "ಏಕೆ ಹೊಡೆಯುತ್ತಿದ್ದೀರಾ? ಹಾಗೆ ಹೊಡೆಯಬಾರದು" ಎಂದು ಹೇಳಿ ಬಿಡಿಸಿ ನಮ್ಮ ತಂದೆಯವರನ್ನು ಕರೆದು "ನೀನು ಪರಿಚಾರಿಕೆಯನ್ನು ಮಾಡಿಕೊಂಡು ನನ್ನ ಬಳಿ ಇರು" ಎಂದು ಅನುಗ್ರಹಿಸಿ ಪರಿಚಾರಿಕೆಯ ಕೆಲಸ ಕೊಟ್ಟರು. ಅಂದಿನಿಂದಲೂ ಕೊನೆಯವರೆಗೂ ನಮ್ಮ ತಂದೆ ಗುರುಗಳ ಸೇವೆಯನ್ನು ಬಹಳ ನಿಷ್ಠೆಯಿಂದ ಮಾಡುತ್ತಿದ್ದರು.

ನಮ್ಮ ತಂದೆಗೆ ಗುರುಗಳನ್ನು ಬಿಟ್ಟರೆ ಪ್ರಪಂಚವೇ ಇರಲಿಲ್ಲ. ಸಂಧ್ಯಾವಂದನೆ ಮಾಡುವುದನ್ನು ಎಂದೂ ತಪ್ಪಿಸುತ್ತಿರಲಿಲ್ಲ. ಮತ್ತು ಸದಾ ಗುರುಸೇವೆಯಲ್ಲಿಯೇ ತಮ್ಮನ್ನು ತೊಡಗಿಸಿಕೊಂಡಿರುತ್ತಿದ್ದರು. ಗುರುಗಳ ಕೊನೆಗಾಲದಲ್ಲಿ ನಮ್ಮ ತಂದೆಯವರೇ ಹೆಚ್ಚು ಬಾರಿ ಗುರುಗಳ ಸೇವೆಗೆ ನಿಯಮಿಸಲ್ಪಟ್ಟವರು. ಗುರುಗಳು ಒಂದು ದಿವಸ ಚಂದ್ರಮೌಳೀಶ್ವರನ ಪೂಜೆ ಮಾಡುವಾಗ ಬಹಳ ದುಃಖದಿಂದ ಕೂತಿದ್ದರಂತೆ. ಶಿಷ್ಯರೆಲ್ಲಾ, ಹೇಳುತ್ತಿದ್ದ ಮಂತ್ರವನ್ನು ನಿಲ್ಲಿಸಿ ಗುರುಗಳನ್ನು "ಏಕೆ ದುಃಖಿಸುತ್ತಿದ್ದೀರಾ?" ಎಂದು ಕೇಳಿದಾಗ ಗುರುವಾಯೂರ್‌ನಲ್ಲಿರುವ ಕೃಷ್ಣನ ದೇವಸ್ಥಾನದಲ್ಲಿ ಬೆಂಕಿ ಹತ್ತಿಕೊಂಡಿದೆ ಎಂದು ಹೇಳಿದರಂತೆ. ಹೀಗೆ ಗುರುಗಳಿಗೆ ಎಲ್ಲಿ ಏನು ನಡೆದರೂ ಗೊತ್ತಾಗಿ ಬಿಡುತ್ತಿತ್ತಂತೆ.

ಮೈಲಿಗೆ ಸರತಿ ಮತ್ತು ಮಡಿ ಸರತಿ ಎಂದು ಎರಡು ತರಹ ಪರಿಚಾರಕರು ಇರುತ್ತಿದ್ದರು. ಮೈಲಿಗೆ ಸರತಿಯವರು ಹೊರಗಡೆಯ ಕೆಲಸ ಮತ್ತು ಮಡಿ ಸರತಿಯವರು ಒಳಗಡೆ ಕೆಲಸವನ್ನು ಅಂದರೆ ಸ್ನಾನಕ್ಕೆ ಅಣಿ ಮಾಡುವುದು, ಒಳಗಡೆ ಕೊಠಡಿಯನ್ನು ಶುಚಿಗೊಳಿಸುವುದು ಇತ್ಯಾದಿಯಾಗಿ ಮಾಡುತ್ತಿದ್ದರು. ನಮ್ಮ ತಂದೆಯವರು ಮಡಿ ಸರತಿಯಲ್ಲಿರುತ್ತಿದ್ದರು. ಗುರುಗಳು ದೇಹ ಬಿಡುವ ಒಂದು ವಾರದ ಮೊದಲಿನಿಂದಲೂ ನಮ್ಮ ತಂದೆಯವರೇ ಗುರುಗಳ ರಾತ್ರಿ ಪಾಳಿಗೆ ನಿಯಮಿಸಲ್ಪಟ್ಟಿದ್ದರು. ಆಗ ನಮ್ಮ ತಾಯಿ ಗರ್ಭಿಣಿಯಾಗಿದ್ದರು. ಗುರುಗಳು ನಮ್ಮ ತಂದೆಗೆ "ನಿನ್ನ ಹೆಂಡತಿ ಬಸುರಿ ಇದ್ದಾರೆ, ಮನೆಗೆ ಹೋಗಿ ಅವರನ್ನು ನೋಡಿಕೊ" ಎಂದು ಹೇಳಿದರಂತೆ. ಆದರೆ ನಮ್ಮ ತಂದೆ "ಪರವಾಗಿಲ್ಲ ನಾನು ಇಲ್ಲಿಯೇ ಇರುತ್ತೇನೆ" ಎಂದರಂತೆ. ಅಮಾವಾಸ್ಯೆಯ ಹಿಂದಿನ ದಿನ ರಾತ್ರಿ ಗುರುಗಳು ತಾವು ಸ್ವೀಕರಿಸುತ್ತಿದ್ದ ಅತ್ಯಲ್ಪ ಆಹಾರವಾದ ಹಾಲು, ಹಣ್ಣನ್ನು ಸಹ ತೆಗೆದುಕೊಳ್ಳಲಿಲ್ಲ. ರಾತ್ರಿ ಹನ್ನೊಂದು ಗಂಟೆಯಾದರೂ ಗುರುಗಳು ವಿಶ್ರಾಂತಿಗೆ ತೆರಳಲಿಲ್ಲವಂತೆ. ನಮ್ಮ ತಂದೆಯವರು ಗುರುಗಳಿಗೆ ವಿಶ್ರಾಂತಿ ಪಡೆಯಲು ಬೇಡಿಕೊಂಡರೂ ಗುರುಗಳು ಎಚ್ಚರವಾಗಿಯೇ ಇದ್ದು, ನಮ್ಮ ತಂದೆಗೆ ಮಲಗಲು ಹೇಳಿದರಂತೆ. ನಮ್ಮ ತಂದೆಗೂ ಹೆಚ್ಚು ನಿದ್ದೆ ಬಂದಿರಲಿಲ್ಲ. ಬ್ರಾಹ್ಮೀ ಮುಹೂರ್ತಕ್ಕೂ ಮುಂಚೆಯೇ ಗುರುಗಳು ಸ್ನಾನಕ್ಕಾಗಿ ನದಿಗೆ ಹೊರಟರಂತೆ. ನಮ್ಮ ತಂದೆ ಸ್ನಾನಕ್ಕೆ ನೀರು ರೆಡಿ ಮಾಡಿಕೊಡುವುದಾಗಿ ಹೇಳಿದ್ದಕ್ಕೆ ಗುರುಗಳು "ಇಲ್ಲ ನಾವು ನದಿಗೆ ಹೋಗುತ್ತೇವೆ" ಎಂದು ನಮ್ಮ ತಂದೆಯವರನ್ನೂ ಕಾಯದೆ ಸೀದಾ ನದಿಕಡೆಗೆ ಹೊರಟರಂತೆ.

ನಮ್ಮ ತಂದೆಯವರು ಸಹ ಲಾಟಿನ್ ಮತ್ತು ಕೊಡೆಯನ್ನು ಹಿಡಿದು ಗುರುಗಳನ್ನು ಹಿಂಬಾಲಿಸಿದರಂತೆ. ಗುರುಗಳು ನದಿಯಲ್ಲಿ ನೀರಿಗೆ ಇಳಿದು ತಮ್ಮ ಅನುಷ್ಠಾನವನ್ನು ನೆರವೇರಿಸಿಕೊಳ್ಳುತ್ತಿದ್ದರು. ನಮ್ಮ ತಂದೆ ಲಾಟಿನ್ನನ್ನು ಪಕ್ಕಕ್ಕೆ ಇಟ್ಟು ಗುರುಗಳ ಮಡಿ ಪಂಚೆಯನ್ನು ತೆಗೆದುಕೊಂಡು ಕುಳಿತುಕೊಂಡರಂತೆ. ಗುರುಗಳು ಒಮ್ಮೆ ನೀರಿನಲ್ಲಿ ಮುಳುಗು ಹಾಕಿ ಮತ್ತೆ ಇನ್ನೊಮ್ಮೆ ಮುಳುಗುಹಾಕಿದರಂತೆ. ಆಗ ಇದ್ದಕ್ಕಿದ್ದ ಹಾಗೆ ಏನೋ

ಶಬ್ದವಾಗಿ ನಮ್ಮ ತಂದೆ ತಿರುಗಿ ನೋಡಿದರಂತೆ. ಅಷ್ಟರಲ್ಲಾಗಲೇ ಗುರುಗಳು ಪದ್ಮಾಸನ ಭಂಗಿಯಲ್ಲೇ ನೀರಿನಲ್ಲಿ ದೇಹ ವಿಸರ್ಜಿಸಲು ಸಂಕಲ್ಪ ಮಾಡಿ ಭೌತಿಕವಾದ ದೇಹವನ್ನು ತುಂಗೆಗೆ ಅರ್ಪಿಸಿದ್ದರಂತೆ. ನಮ್ಮ ತಂದೆಗೆ ಅಷ್ಟಾಗಿ ಈಜು ಬರುತ್ತಿರಲಿಲ್ಲವಾದರೂ ಗುರುಗಳು ನದಿಯಲ್ಲಿ ಮುಳುಗಿ ಹೋಗುತ್ತಿರುವುದನ್ನು ಕಂಡು ಗಾಬರಿಯಾಗಿ ನದಿಗೆ ಹಾರಿದರು. ಒಂದು ಕೈಯಲ್ಲಿ ಈಜುತ್ತಾ ಮತ್ತೊಂದು ಕೈಯಲ್ಲಿ ಗುರುಗಳನ್ನು ಹಿಡಿದುಕೊಂಡು ದಡ ಸೇರಲು ಪ್ರಯತ್ನಿಸುತ್ತಿದ್ದರಂತೆ. ಸುಮಾರು ಬೆಳಗಿನ ಜಾವ ೪:೩೦ ರವರೆಗೂ ಅದೇ ರೀತಿ ಸೆಣಸಾಡಿದರಂತೆ. ಆದರೆ ಗುರುಗಳು ಪದ್ಮಾಸನದಲ್ಲಿ ಇದ್ದ ಕಾರಣ ನಮ್ಮ ತಂದೆಗೆ ಗುರುಗಳ ಭೌತಿಕ ದೇಹವನ್ನು ದಡಕ್ಕೆ ತರಲು ಸಾಧ್ಯವಾಗಲಿಲ್ಲ. ಅದೇ ಸಮಯದಲ್ಲಿ ಅಲ್ಲಿಗೆ ಸ್ನಾನಕ್ಕೆಂದು ಬಂದಿದ್ದ ಕೇಶವಾಚಾರಿ ಎಂಬುವವರನ್ನು ನಮ್ಮ ತಂದೆಯವರು ಕೂಗಿ ದೋಣಿ ತೆಗೆದುಕೊಂಡು ಬನ್ನಿ ಎಂದು ಹೇಳಿದರಂತೆ. ಆದರೆ ನಮ್ಮ ತಂದೆಯವರು ಈ ಕಡೆ ದಡದಲ್ಲಿ ಮತ್ತು ಕೇಶವಾಚಾರಿಯವರು ಆ ಕಡೆ ದಡದಲ್ಲಿ ಇದ್ದುದರಿಂದ ಅವರಿಗೆ ಸರಿಯಾಗಿ ಕೇಳಿಸಲಿಲ್ಲವಂತೆ. ನಂತರ ಏನೋ ಅನಾಹುತವಾಗಿದೆ ಎಂದು ಮನಗಂಡ ಕೇಶವಾಚಾರಿಯವರು ನಮ್ಮ ತಂದೆಯ ಹತ್ತಿರ ಹೋಗಿ ನೋಡಿ ಅವರನ್ನು ಮತ್ತು ಗುರುಗಳನ್ನು ದಡಕ್ಕೆ ಮುಟ್ಟಿಸಿದರಂತೆ. ನಮ್ಮ ತಂದೆಯವರು ಬಹಳ ನೀರನ್ನು ಕುಡಿದಿದ್ದರಿಂದ ಸುಸ್ತಾಗಿ ಹೋಗಿದ್ದರು. ಅವರಿಗೆ ಇಂಜೆಕ್ಷನ್ ಅನ್ನು ನೀಡಿ ಮತ್ತು ಕುಡಿದ ನೀರನ್ನು ಹೊರಗೆ ತೆಗೆದು ಸುಧಾರಿಸಿಕೊಳ್ಳುವಂತೆ ಮಾಡಿದರಂತೆ. ಆದರೆ ಗುರುಗಳು ಮಾತ್ರ ಅಷ್ಟರಲ್ಲಾಗಲೇ ಪರಬ್ರಹ್ಮನಲ್ಲಿ ಲೀನವಾಗಿದ್ದರು. ತಕ್ಷಣ ಈ ವಿಷಯವನ್ನು ಚಂದ್ರಮೌಳೇಶ್ವರನ ತೊಟ್ಟಿಯಲ್ಲಿ ಇದ್ದ ಕಿರಿಯ ಸ್ವಾಮಿಗಳಾದ ಶ್ರೀ ವಿದ್ಯಾತೀರ್ಥಸ್ವಾಮಿಗಳವರಿಗೆ ಮುಟ್ಟಿಸಿದರು. ಶ್ರೀ ವಿದ್ಯಾತೀರ್ಥ ಸ್ವಾಮಿಗಳೂ ಸಹ ಬಹಳ ದುಃಖದಿಂದಲೇ ನದಿಯ ಬಳಿ ಬಂದರು.

ವೈದ್ಯರು ಬಂದು ಗುರುಗಳನ್ನು ಪರೀಕ್ಷಿಸಿದರು. ಚಂದ್ರಮೌಳೀಶ್ವರನ ತೊಟ್ಟಿಯಲ್ಲಿ ಅಕ್ಕಿ, ಬೂದಿಯನ್ನು ಗುರುಗಳ ಸುತ್ತ ಹಾಕಿ ಇನ್ನೂ ಏನಾದರೂ ಜೀವ ಉಳಿಯಬಹುದೇ? ಎಂದು ನೋಡಿದರು. ಆದರೆ ಪ್ರಯೋಜನವಾಗಲಿಲ್ಲ. ಅಷ್ಟು ಹೊತ್ತು ನೀರಿನಲ್ಲಿ ಇದ್ದರೂ ಗುರುಗಳ ದೇಹದಲ್ಲಿ ಒಂದು ಹನಿ ನೀರು ಸಹ ಸೇರಿರಲಿಲ್ಲ. ಇದನ್ನು ನೋಡಿದ ವೈದ್ಯರೇ ವಿಸ್ಮಿತರಾದರು. ನಂತರ ಸಂಜೆಯ ವೇಳೆಗೆ ಗುರುಗಳನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಉತ್ಸವವನ್ನು ನಡೆಸಿ ಎಲ್ಲಾ ಕಾರ್ಯಗಳನ್ನು ಶಾಸ್ತ್ರೋಕ್ತವಾಗಿ ನಡೆಸಿ ಅವರ ಸಮಾಧಿಯನ್ನು ನರಸಿಂಹವನದಲ್ಲಿರುವ ಶ್ರೀ ನೃಸಿಂಹಭಾರತೀ ಸ್ವಾಮಿಗಳವರ ಸಮಾಧಿಯ ಪಕ್ಕದಲ್ಲೇ ಮಾಡಿದರು.

ನಮ್ಮ ತಂದೆಯವರು ಬಹಳ ಪ್ರಯಾಸದಿಂದ ಗುರುಗಳ ದೇಹವನ್ನು ದಡಕ್ಕೆ ತರಲು ಶ್ರಮಿಸಿದ್ದಕ್ಕಾಗಿ ಮಠದಿಂದ ನಮ್ಮ ತಂದೆಯವರಿಗೆ ಬಂಗಾರದ ಪದಕವನ್ನು ನೀಡಿದರು.

ನಂತರ ನಮ್ಮ ತಂದೆಯವರು ಶ್ರೀ ವಿದ್ಯಾತೀರ್ಥಸ್ವಾಮಿಗಳಿಗೂ ಪರಿಚಾರಿಕೆಯನ್ನು ಮಾಡಿಕೊಂಡು ಅಲ್ಲಿಯೇ ಇದ್ದರು. ಆದರೆ ವಯಸ್ಸಾದ ಕಾರಣ ೧೯೭೬ ನೇ ಇಸವಿಯಲ್ಲಿ ನಮ್ಮ ತಂದೆಯವರನ್ನು ನಾನು ಮಠದ ಜವಾಬ್ದಾರಿಯಿಂದ ಬಿಡಿಸಿ ಶಿವಮೊಗ್ಗಕ್ಕೆ ಕರೆದುಕೊಂಡು ಹೋದೆ. ೧೯೯೬ ರಲ್ಲಿ ನಮ್ಮ ತಂದೆ ನಿಧನ ಹೊಂದಿದರು.

ಗುರುಗಳು ದೇಹ ಬಿಟ್ಟಾಗ ನನಗೆ ೪ ವರ್ಷ. ಗುರುಗಳು ಒಮ್ಮೆ ನನಗೆ ಕಲ್ಲುಸಕ್ಕರೆಯನ್ನು ಕೊಟ್ಟಿದ್ದು ಅಸ್ಪಷ್ಟವಾಗಿ ನನ್ನ ನೆನಪಿನಲ್ಲಿದೆ. ಈಗಲೂ ನಮ್ಮ ಮನೆಯಲ್ಲಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಆರಾಧನೆಯನ್ನು ಪ್ರತಿ ವರ್ಷದ ಮಹಾಲಯ ಅಮಾವಾಸ್ಯೆಯಂದು ನಡೆಸುತ್ತಿದ್ದೇವೆ. ಬಹಳ ಜನ ಗುರುಭಕ್ತರು ಅದರಲ್ಲಿ ಪಾಲ್ಗೊಳ್ಳುತ್ತಾರೆ. ಗುರುಗಳ ಆಶೀರ್ವಾದದಿಂದ ನಾವು ನೆಮ್ಮದಿಯ ಜೀವನ ನಡೆಸುತ್ತಿದ್ದೇವೆ. ನನಗೆ ಯಾವುದೇ ಕಷ್ಟದ ಸಮಯ ಬಂದರೂ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನು ಒಮ್ಮೆ ನೆನೆದರೆ ಸಾಕು, ನನ್ನ ಕಷ್ಟ ಪರಿಹಾರವಾಗುತ್ತದೆ.

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊



ಛಾಯಾಚಿತ್ರ: ಲೇಖಕ

**ಮಹಾಬಲ ಭಟ್ಟರು**
**(ಗುರುಗಳ ದೇಹವನ್ನು ನದಿಯಿಂದ ದಡಕ್ಕೆ ತಂದ ಪರಿಚಾರಕರು)**



ಛಾಯಾಚಿತ್ರ: ಲೇಖಕ



ಛಾಯಾಚಿತ್ರ: ಲೇಖಕ

**ಗುರುಗಳ ದೇಹವನ್ನು ದಡಕ್ಕೆ ತರಲು ಶ್ರಮಿಸಿದ್ದಕ್ಕಾಗಿ ಮಠದಿಂದ ನೀಡಿದ ಬಂಗಾರದ ಪದಕ**

✲✲✲✲✲✲✲✲✲✲✲✲✲✲✲✲✲✲✲✲✲✲✲✲✲✲✲✲✲✲

**ಶಾರದಾಂಬಾ**

**ಮೂರನೇ ಮನೆ ರಾಮಭಟ್ಟರ ತಂಗಿ (ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಪೂರ್ವಾಶ್ರಮದ ಮನೆಯಲ್ಲಿ ಹಲವು ವರ್ಷ ವಾಸವಿದ್ದ ವೇದ ವಿದ್ವಾಂಸರು)**

ಹೊಸಕೆರೆ ಹಳ್ಳಿ, ಬೆಂಗಳೂರು

ನನ್ನ ಹೆಸರು ಶಾರದಾಂಬಾ, ನಮ್ಮ ಕುಟುಂಬ ಶತಮಾನಗಳಿಂದ ಶೃಂಗೇರಿಯಲ್ಲೇ ನೆಲೆಸಿದ್ದು, ನಮ್ಮ ತಂದೆ ಶ್ಯಾಮ ಭಟ್ಟರು ಮಠದಲ್ಲಿ ಗುರುಗಳ ಸೇವೆ ಮಾಡಿಕೊಂಡಿದ್ದರು. ನಮ್ಮ ಅಣ್ಣ ಮೂರನೇ ಮನೆ ರಾಮಭಟ್ಟರು ಋಗ್ವೇದಿಗಳಲ್ಲಿ ಪ್ರಮುಖರು. ಮಠದಲ್ಲಿ ಋಗ್ವೇದ ಪಾಠ ಹೇಳಿಕೊಡುತ್ತಿದ್ದರು.

ನಾವು ೧೯೬೨ ರಲ್ಲಿ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಪೂರ್ವಾಶ್ರಮದ ಮನೆಗೆ ಮಠದ ಆಣತಿಯಂತೆ ಬಂದೆವು. ನಾವು ಬರುವುದಕ್ಕೆ ಮೊದಲು ಒಬ್ಬರು ವೇದ ವಿದ್ವಾಂಸರು ಅಲ್ಲಿ ವಾಸವಿದ್ದರು. ಅದಕ್ಕೂ ಮೊದಲು ಕೆಲವು ಸಂನ್ಯಾಸಿಗಳು ಇದ್ದರಂತೆ. ನಮ್ಮ ಅಣ್ಣ ಮೂರನೇ ಮನೆ ರಾಮಭಟ್ಟರು ೨೦೦೩ ರಲ್ಲಿ ನಿಧನ ಹೊಂದಿದರು. ಅದಾದ ಒಂದು ವರ್ಷಕ್ಕೆ ಆ ಮನೆಯನ್ನು ಬಿಟ್ಟುಕೊಟ್ಟೆವು. ನಮ್ಮ ಮನೆಯಲ್ಲಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಪಾದುಕೆ ಮತ್ತು ಅವರು ನೀಡಿದ ಸಾಲಿಗ್ರಾಮ ಇತ್ತು. ನಮ್ಮ ಅಣ್ಣ ರಾಮಭಟ್ಟರು ಪ್ರತಿ ದಿವಸ ಅದಕ್ಕೆ ಪೂಜೆ ಸಲ್ಲಿಸುತ್ತಿದ್ದರು. ಶ್ರೀ ವಿದ್ಯಾತೀರ್ಥ ಸ್ವಾಮಿಗಳು ನಮ್ಮ ಮನೆಗೆ ಕೆಲವೊಮ್ಮೆ ಬರುತ್ತಿದ್ದರು. ಆಗ ನಮ್ಮ ಮನೆಯಲ್ಲಿ ಸಗಣಿಯಿಂದ ಸಾರಿಸಿ ನೆಲವನ್ನು ಶುದ್ಧಗೊಳಿಸಿರುತ್ತಿದ್ದೆವು. ನಮ್ಮ ಮನೆಯಲ್ಲಿ ಒಂದು ಹಲಸಿನ ಮರ ಇತ್ತು. ಅದರಲ್ಲಿ ಬಿಡುತ್ತಿದ್ದ ಮೊದಲ ಹಣ್ಣನ್ನು ಶ್ರೀ ವಿದ್ಯಾತೀರ್ಥ ಸ್ವಾಮಿಗಳಿಗೆ ಅರ್ಪಿಸುತ್ತಿದ್ದೆವು. ನಾನು ಚಿಕ್ಕ ವಯಸ್ಸಿನಿಂದಲೂ ಪ್ರತಿ ಶುಕ್ರವಾರ ಮಠಕ್ಕೆ ಹೋಗಿ ಗುರುಗಳ ದರ್ಶನ ಮಾಡುತ್ತಿದ್ದೆ. ಶ್ರೀ ವಿದ್ಯಾತೀರ್ಥರು ಶ್ರೀ ಚಂದ್ರಮೌಳೀಶ್ವರನ ಪೂಜೆ ಮಾಡುತ್ತಿದ್ದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಶಾರದಾಂಬಾ ದರ್ಶನ ಪಡೆದು ವಾಪಸ್ ಹೋಗುತ್ತಿದ್ದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ತುಂಬಾ ಸರಳ ವಸ್ತ್ರ ಹಾಕಿಕೊಳ್ಳುತ್ತಿದ್ದರು. ಜರಿ ಇಲ್ಲದ ಪಂಚೆ ಉಡುತ್ತಿದ್ದರು. ಗುರುಗಳು ಹೆಚ್ಚು ಮಾತನಾಡುತ್ತಿರಲಿಲ್ಲ. ತುಂಬಾ ಮೃದುವಾಗಿ ಮಾತನಾಡುತ್ತಿದ್ದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಅಂತರ್ಮುಖರಾಗಿದ್ದಾಗ ಹೊರಗಡೆಯೇ ಬರುತ್ತಿರಲಿಲ್ಲ. ನಾವು ತೂಗುಸೇತುವೆಯ ಮೂಲಕ ನರಸಿಂಹವನಕ್ಕೆ ಹೋಗುತ್ತಿದ್ದೆವು. ಆದರೆ ಗುರುಗಳ ದರ್ಶನ ಬಹಳ ಅಪರೂಪವಾಗಿ ಆಗುತ್ತಿತ್ತು.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನ ನೋಡಿದರೆ ಸಾಕು ಎಂತಹವರಿಗೂ ಭಕ್ತಿ ಬರುತ್ತಿತ್ತು. ಅಂತಹ ತೇಜಸ್ಸು ಇತ್ತು ಅವರ ಮುಖದಲ್ಲಿ. ಅವರನ್ನು ನೋಡಿದರೆ ಸಾಕ್ಷಾತ್ ದೇವರನ್ನೇ ನೋಡಿದ ಹಾಗೆ ಆಗುತ್ತಿತ್ತು. ಅವರ ಆಶೀರ್ವಾದ ಸಿಕ್ಕರೆ ತುಂಬಾ ಒಳ್ಳೆಯದಾಗುತ್ತಿತ್ತು ಅಂತ ಪ್ರತಿಯೊಬ್ಬರೂ ನುಡಿಯುತ್ತಿದ್ದರು. ಗುರುಗಳು ಸದಾ ಅಂತರ್ಮುಖಿಗಳಾಗಿರುತ್ತಿದ್ದರು. ಅವರು ಬಹಿರ್ಮುಖರಾದ ಸುದ್ದಿ ತಿಳಿದ ತಕ್ಷಣ ಪ್ರತಿಯೊಬ್ಬರೂ ಅವರ ದರ್ಶನಕ್ಕಾಗಿ ಓಡೋಡಿ ಬರುತ್ತಿದ್ದರು. ಫಲಮಂತ್ರಾಕ್ಷತೆ ಕೊಡುವಾಗ ಇಬ್ಬರು ಗುರುಗಳೂ ಇರುತ್ತಿದ್ದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಕೆಲವರಿಗೆ ತೀರ್ಥ ಕೊಟ್ಟು ತಮ್ಮ ತಪೋನುಷ್ಠಾನದಲ್ಲಿ ತೊಡಗಲು ವಾಪಸ್ಸಾಗುತ್ತಿದ್ದರು.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಮಾತನಾಡುತ್ತಿರಲಿಲ್ಲ. ಆದರೆ ಶ್ರೀ ವಿದ್ಯಾತೀರ್ಥ ಸ್ವಾಮಿಗಳು ಎಲ್ಲರೊಡನೆಯೂ ಮಾತನಾಡುತ್ತಿದ್ದರು. ತುಂಬಾ ಕೇಳಿಕೊಂಡರೆ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಕೇವಲ ಒಂದೆರಡು ನಿಮಿಷ ಮಾತನಾಡಿಸುತ್ತಿದ್ದರು. ಅದೂ ತೀರಾ ಅನಿವಾರ್ಯ ಸಂದರ್ಭಗಳಲ್ಲಿ ಮುಮುಕ್ಷುಗಳೊಡನೆ, ಪ್ರಾಮಾಣಿಕ ಶ್ರದ್ಧಾವಂತರ ಜೊತೆಗೆ ಮಾತ್ರ.

ಶೃಂಗೇರಿಯಲ್ಲಿ ದಸರಾ ಬಹಳ ವಿಜೃಂಭಣೆಯಿಂದ ನಡೆಯುತ್ತಿತ್ತು. ದಸರಾ ದರ್ಬಾರಿಗೆ ಶ್ರೀ ವಿದ್ಯಾತೀರ್ಥ ಸ್ವಾಮಿಗಳು ಬರುತ್ತಿದ್ದರು. ಆದರೆ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಬರುತ್ತಿರಲಿಲ್ಲ.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಮಳೆಗಾಲದಲ್ಲಿ ಚಂದ್ರಮೌಳೀಶ್ವರನ ತೊಟ್ಟಿಯಲ್ಲಿ ಇರುತ್ತಿದ್ದರು. ಬೇರೆ ಎಲ್ಲಾ ಸಮಯದಲ್ಲೂ ನರಸಿಂಹವನದಲ್ಲೇ ಅವರ ವಾಸ. ಒಮ್ಮೆ ಮಠದಲ್ಲಿ ಚಂಡಿಕಾ ಹೋಮ ನಡೆದಿತ್ತು. ಆಗ ಮಠದವರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನು ಕರೆಯಲು ಹೋಗಿದ್ದರು. ಆದರೆ ಗುರುಗಳು "ಇನ್ನು ಸರಿಯಾಗಿ ಅರ್ಧ ಗಂಟೆಗೆ ಮಳೆ ಬರುತ್ತದೆ, ಅದು ಬಂದರೆ ನಾನು ಬಂದಹಾಗೆ" ಎಂದು ನುಡಿದು ವಾಪಸ್ ಕಳುಹಿಸಿದರು. ಗುರುಗಳು ಹೇಳಿದ ಆ ಮಾತು ಮಠದ ಎಲ್ಲಾ ಕಡೆ ಹರಡಿ ಪ್ರತಿಯೊಬ್ಬರೂ ಅದರ ಬಗ್ಗೆ ಚರ್ಚಿಸುತ್ತಿದ್ದರು. ಗುರುಗಳು ನುಡಿದಂತೆ ಸರಿಯಾಗಿ ಅರ್ಧ ಗಂಟೆಗೆ ಜೋರು ಮಳೆ ಪ್ರಾರಂಭವಾಯಿತು. ನಮಗೆಲ್ಲ ಅದನ್ನು ಕಣ್ಣಾರೆ ನೋಡಿ ಬಹಳ ಆಶ್ಚರ್ಯವಾಯಿತು. ಗುರುಗಳು ನಿಜವಾಗಲೂ ದೈವಾಂಶ ಸಂಭೂತರಾಗಿದ್ದರು.

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ದೇಹ ಬಿಟ್ಟ ಸುದ್ದಿ ಬಹು ಬೇಗ ಎಲ್ಲಾ ಕಡೆಯೂ ಹರಡಿತು. ತಕ್ಷಣ ನಾವೆಲ್ಲಾ ನದಿಯ ತೀರಕ್ಕೆ ಹೋದೆವು. ಗುರುಗಳನ್ನು ನದಿಯ ದಡದಲ್ಲಿ ಕೂರಿಸಿದ್ದರು. ನಂತರ ಅಲ್ಲಿಂದ ಚಂದ್ರಮೌಳೀಶ್ವರನ ತೊಟ್ಟಿಗೆ ಸ್ಥಳಾಂತರಿಸಿದರು. ಊರಿನ ಎಲ್ಲಾ ಜನರು ಬಂದು ಗುರುಗಳ ದರ್ಶನ ಪಡೆದರು. ಶೃಂಗೇರಿ ಊರೊಳಗೆ ಮೆರವಣಿಗೆ ಮಾಡಿ ನಂತರ ಶಾಸ್ತ್ರೋಕ್ತವಾಗಿ ನರಸಿಂಹವನದಲ್ಲಿ ಗುರುಗಳ ಅಂತ್ಯಸಂಸ್ಕಾರವನ್ನು ಮಾಡಿದರು. ಗುರುಗಳ ಆರಾಧನೆಗೆ ಹಲವಾರು ಊರಿನಿಂದ ಬಂದ ಬಹಳ ಜನರು ಭಾಗವಹಿಸಿದ್ದರು.

ಇಂದು ನಾವೇನಾದರೂ ಉತ್ತಮ ಸ್ಥಿತಿಯಲ್ಲಿ ಇದ್ದೇವೆ ಅಂದರೆ ಅದಕ್ಕೆ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಆಶೀರ್ವಾದವೇ ಕಾರಣ.

********************************

**ಗೋಪೀನಾಥ (ಆನಂದ್ ಜೀ)**
**ಚಾಮುಂಡಿ ಬೆಟ್ಟದ ನಾರಾಯಣಸ್ವಾಮಿ ದೇವಸ್ಥಾನದ ಹತ್ತಿರ**
**ಮೈಸೂರು**

ನಾನು ಮೈಸೂರು ಮಹಾರಾಣಿ ಹಾಗು ಶ್ರೀ ಕೃಷ್ಣ ರಾಜ ಒಡೆಯರ್‌ರವರ ಪತ್ನಿಯಾಗಿದ್ದ ಪ್ರತಾಪಕುಮಾರಿ ಅಮ್ಮಣ್ಣಿದೇವಿಯವರ ಆಪ್ತ ಸಹಾಯಕನಾಗಿದ್ದೆ. ಒಮ್ಮೆ ಮಹಾರಾಣಿಯವರ ಜೊತೆ ಬೆಂಗಳೂರಿನ ಅರಮನೆಗೆ ಹೋಗಿದ್ದೆ. ಮಹಾರಾಣಿಯವರು

ಇದ್ದಕ್ಕಿದ್ದಂತೆಯೇ ನನ್ನನ್ನು ಬಿಟ್ಟು ಶೃಂಗೇರಿಗೆ ಹೊರಟು ಹೋದರು. ನನಗೆ ಬಹಳ ಬೇಜಾರಾಯಿತು. ಸಾಮಾನ್ಯವಾಗಿ ಮಹಾರಾಣಿಯವರು ಹೋದಲ್ಲೆಲ್ಲಾ ನನ್ನನ್ನೂ ಕರೆದುಕೊಂಡು ಹೋಗುತ್ತಿದ್ದರು.

ಆದರೆ ಮಹಾರಾಣಿಯವರು ಶೃಂಗೇರಿಗೆ ಹೋದ ಮರುದಿನವೇ ಅರಮನೆಯ ಮುಂದೆ ಒಂದು ಕಾರು ಬಂದು ನಿಂತಿತು. ಅದರಲ್ಲಿ ಬಂದಿದ್ದವರು ನನ್ನನ್ನು ಕುರಿತು "ಮಹಾರಾಣಿಯವರು ಶೃಂಗೇರಿಗೆ ನಿಮ್ಮನ್ನು ಕರೆದುಕೊಂಡು ಬರಲು ಕಳಿಸಿದ್ದಾರೆ" ಎಂದರು. ಆದರೆ ನನಗೆ ಆಶ್ಚರ್ಯವಾಯಿತು ಮತ್ತು ನಂಬಿಕೆ ಬರಲಿಲ್ಲ. ಅವರು ಸ್ಪಷ್ಟವಾಗಿ ನನ್ನನ್ನೇ ಕರೆದುಕೊಂಡು ಹೋಗಲು ಬಂದಿರುವುದಾಗಿ ಹೇಳಿದ ಮೇಲೆ ನಾನು ಅವರ ಜೊತೆ ಶೃಂಗೇರಿಗೆ ಹೊರಟೆ. ಶೃಂಗೇರಿಗೆ ತಲುಪಿದ ಮೇಲೆ ಮಹಾರಾಣಿಯವರನ್ನು ಭೇಟಿ ಮಾಡಿದೆ. ಅವರು ನನಗೆ "ಆಯಾಸವಾಗಿರುತ್ತೆ ವಿಶ್ರಾಂತಿ ತೆಗೆದುಕೋ, ನಾಳೆ ಜಗದ್ಗುರುಗಳ ದರ್ಶನ ಮಾಡುವುದಕ್ಕೆ ಹೋಗೋಣ" ಎಂದು ಹೇಳಿದರು. ನನಗೆ ಮಹಾರಾಣಿಯವರು ಸೀರೆಯನ್ನು ಒಗೆದು ಒಣಗಿ ಹಾಕಲು ಹೇಳಿದರು. ರಾತ್ರಿ ಮಠದಲ್ಲಿಯೇ ಊಟ ಮಾಡಿದೆವು.

ಬೆಳಗ್ಗೆ ಸ್ನಾನ ಮುಗಿಸಿ ಶಾರದಾಂಬಾ ದರ್ಶನವನ್ನು ಪಡೆದು ಮಹಾರಾಣಿಯವರು ಮತ್ತು ನಾನು ಒಬ್ಬರು ಪರಿಚಾರಕರೊಡನೆ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ದರ್ಶನಕ್ಕೆ ಹೋದೆವು. ಗುರುಗಳು ನರಸಿಂಹವನದಲ್ಲಿ ಇದ್ದರು. ಗುರುವರ್ಯರು "ಮಹಾರಾಜರು ಚನ್ನಾಗಿ ಇದ್ದಾರಾ?" ಎಂದು ಕೇಳಿದರು. ನನಗೆ ನಿಂತುಕೊಂಡು ನೇರವಾಗಿ ದರ್ಶನ ಮಾಡಲಿಕ್ಕೇ ಆಗಲಿಲ್ಲ. ಗುರುಗಳ ಮುಖ ಧಗಧಗ ಅಂತ ಪ್ರಜ್ವಲಿಸುತ್ತಿತ್ತು. ಬೆಂಕಿಯನ್ನು ನೋಡಿದ ಹಾಗೆ ಆಯಿತು. ಅವತ್ತು ನನಗೆ ಭಗವಂತನ ದರ್ಶನವಾಯಿತು ಅನ್ನಿಸಿತು. ನನ್ನ ಬಾಯಿಂದ ಯಾವ ಮಾತೂ ಬರಲಿಲ್ಲ. ಭಗವಂತನ ಜೊತೆ ಏನು ಮಾತನಾಡಲು ಸಾಧ್ಯ? ಸುಮ್ಮನೆ ಅವರ ಮುಖಾರವಿಂದವನ್ನೇ ಪದೇ ಪದೇ ನೋಡುತ್ತಾ ಮೂಕನಾಗಿ ನಿಂತುಬಿಟ್ಟಿದ್ದೆ.

ಒಮ್ಮೆ ಗೋಕುಲಾಷ್ಟಮಿಯ ದಿನ ನಾನು ಮೈಸೂರಿನ ಚಾಮುಂಡಿ ಬೆಟ್ಟದಲ್ಲಿರುವ ನಾರಾಯಣ ಸ್ವಾಮಿ ದೇವಸ್ಥಾನದಲ್ಲಿ ಪೂಜೆ ಮಾಡುತ್ತಿದ್ದೆ. ರಾತ್ರಿಯಾಗಿತ್ತು ಮತ್ತು ಬಹಳ ಜೋರಾಗಿ ಮಳೆ ಬರುತ್ತಿತ್ತು. ಸಮಾನ್ಯವಾಗಿ ಬಹಳ ಜನರು ಬರುತ್ತಿದ್ದರು ಅಲ್ಲಿಗೆ, ಆದರೆ ಮಳೆ ಬಂದ ಕಾರಣ ಕೇವಲ ನಾಲ್ಕಾರು ಜನರು ಇದ್ದರಷ್ಟೇ ಅವತ್ತು. ನನ್ನ ಹಿಂದೆಯೇ ಇದ್ದ ಬೆಳ್ಳಿ ಬಾಗಿಲ ಬಳಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಫೋಟೋ ಇತ್ತು. ಒಂದು ಬಲವಾದ ಸಿಡಿಲು ಬಡಿಯಿತು. ನೋಡ ನೋಡುತ್ತಿದ್ದಂತೆಯೇ ನನ್ನ ಎದುರೇ ಬಂದ ಆ ಸಿಡಿಲು (ಬೆಳಕು) ಇನ್ನೇನು ನನಗೆ ಬಡಿಯಬೇಕು ಎನ್ನುವಷ್ಟರಲ್ಲಿ ನನಗೆ, ನನ್ನನ್ನು ಸೇರಿ ದೇವಸ್ಥಾನದ ಕಥೆ ಸಂಪೂರ್ಣವಾಗಿ ಮುಗಿಯಿತು ಎನ್ನಿಸಿತ್ತು. ಆದರೆ ನೇರವಾಗಿ ಬರುತ್ತಿದ್ದ ಆ ಸಿಡಿಲು ಇದ್ದಕ್ಕಿದ್ದಂತೆಯೇ ತನ್ನ ದಿಕ್ಕನ್ನು ಬದಲಿಸಿ ಚಂದ್ರಶೇಖರ ಭಾರತೀ ಸ್ವಾಮಿಗಳ ಫೋಟೋದ ಒಂದು ಗೇಣು ಪಕ್ಕದಿಂದ ಹಾದು ಹೋಗಿ ಗೋಡೆ ತೂತು ಮಾಡಿಕೊಂಡು ಆಂಜನೇಯನ ಹತ್ತಿರ ತಲುಪಿ ಯಾವುದಕ್ಕೂ ಹಾನಿಮಾಡದಂತೆ ನೆಲಕ್ಕೆ ಬಡಿಯಿತು. ಅಂದು ನನ್ನ ಜೀವ ಹೋಗಬೇಕಿತ್ತು. ಆದರೆ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ನನ್ನನ್ನು ಉಳಿಸಿದರು. ಒಮ್ಮೆ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಶಾರದಾಂಬಾ ದೇವಸ್ಥಾನದಿಂದ ಬರುತ್ತಿದ್ದರಂತೆ. ಆಗ ಅಲ್ಲಿ ಕೆಲವು ಜನರ ಗುಂಪು

ಸೇರಿ ಏನನ್ನೋ ಮಾಡುತಿದ್ದದ್ದನ್ನು ಗಮನಿಸಿ ಗುರುಗಳು ಏನದು ಎಂದು ವಿಚಾರಿಸಲು, ಮೈಸೂರು ಮಹಾರಾಜರು ದರ್ಶನಕ್ಕೆ ಬರುತ್ತಿದ್ದಾರೆ ಎಂದು ತಿಳಿಯಿತು. ಆದರೆ ಗುರುಗಳು ತಮ್ಮ ತಪೋನುಷ್ಠಾನಗಳಿಗೆ ತೆರಳಲು ನಿರ್ಧರಿಸಿದ್ದರಿಂದ ಮಹಾರಾಜರಿಗೆ ದರ್ಶನ ಕೊಡಲು ಈಗ ಆಗುವುದಿಲ್ಲ ಎಂದು ಹೇಳಿ ತಮ್ಮ ಏಕಾಂತಸ್ಥಳಕ್ಕೆ ಹೋದರಂತೆ. ಹೀಗೆ ಗುರುಗಳು ಅವರ ಸಾಧನೆಯ ಸಮಯದಲ್ಲಿ ಮಹಾರಾಜರೇ ಬರಲಿ ಅಥವಾ ಯಾವುದೇ ವ್ಯಕ್ತಿ ಬರಲಿ ದಾಕ್ಷಿಣ್ಯಕ್ಕೆ ಒಳಗಾಗದೆ ದರ್ಶನವನ್ನು ನಿರಾಕರಿಸಿ ತಮ್ಮ ಸಾಧನೆಯಲ್ಲಿ ನಿರತರಾಗುತ್ತಿದ್ದರಂತೆ.

*******************************

## ಶಂಕರನಾರಾಯಣ ಸೋಮಯಾಜಿ

**(ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಆಪ್ತ ಸಹಾಯಕರಾಗಿದ್ದ ರಾಮ ಸೋಮಯಾಜಿಗಳ ಮಗ)**

**ಶ್ರೀರಾಂಪುರ, ಮೈಸೂರು**

ನಾವು ಮೂಲತಃ ಶೃಂಗೇರಿಯವರು. ನಮ್ಮ ತಂದೆ ರಾಮ ಸೋಮಯಾಜಿಯವರು ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳಿಗೆ ಖಾಸಾ ಪರಿಷ್ಕಾರ್ ಆಗಿದ್ದರು. ನಮ್ಮ ಅಣ್ಣ ಅಹೋಬಲ ಸೋಮಯಾಜಿಗಳು ಗುರುಗಳು ದೇಹ ಬಿಟ್ಟ ಸಂದರ್ಭದಲ್ಲಿ ನದಿಯಲ್ಲಿ ಈಜಿ ಗುರುಗಳ ಭೌತಿಕ ದೇಹವನ್ನು ದಡಸೇರಿಸಲು ಪ್ರಯತ್ನಿಸಿದವರಲ್ಲಿ ಒಬ್ಬರು. ನಾನು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನು ಹಲವಾರು ಬಾರಿ ನೋಡಿದ್ದೇನೆ. ಗುರುಗಳು ಚಂದ್ರಮೌಳೀಶ್ವರನ ಪೂಜೆ ಮಾಡಿದ್ದನ್ನು, ಶಿವರಾತ್ರಿಯಲ್ಲಿ ಮಲಹಾನಿಕರೇಶ್ವರನ ಪೂಜೆ ಮಾಡಿದ್ದನ್ನು ನೋಡಿದ್ದೇನೆ. ಆದರೆ ಅವರ ಪ್ರವಚನವನ್ನು ಕೇಳಿಲ್ಲ. ದಸರಾದಲ್ಲಿ ಶ್ರೀ ವಿದ್ಯಾತೀರ್ಥ ಸ್ವಾಮಿಗಳು ದರ್ಬಾರ್ ನಲ್ಲಿ ಕೂರುತ್ತಿದ್ದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಅಮ್ಮನವರ ಪೂಜೆ ಮಾಡುತ್ತಿದ್ದರು. ರಥೋತ್ಸವದಲ್ಲಿ ಶ್ರೀ ವಿದ್ಯಾತೀರ್ಥ ಸ್ವಾಮಿಗಳು ಪಲ್ಲಕ್ಕಿಯಲ್ಲಿ ಬರುತ್ತಿದ್ದರು, ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ರಥದ ಜೊತೆ ಬರುತ್ತಿದ್ದರು.

೧೯೫೨ರಲ್ಲಿ ಗುರುಗಳ ೬೦ನೇ ವರ್ಧಂತಿ ಮಾಡುತ್ತೇವೆ ಎಂದು ಮಠದ ಶಿಷ್ಯರು ಕೇಳಿದಾಗ ಗುರುಗಳು ಅದನ್ನು ನಿರಾಕರಿಸಿದ್ದರು. ಒಂದು ವರ್ಷದ ನಂತರ ಲೋಕಕಲ್ಯಾಣಕ್ಕಾಗಿ ಹೋಮ ನಡೆಸಲಾಯಿತು. ಆದರೆ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಆ ಕಾರ್ಯಕ್ರಮದಲ್ಲಿ ಭಾಗವಹಿಸದೆ ನರಸಿಂಹವನದಲ್ಲಿ ಧ್ಯಾನನಿರತರಾಗಿಯೇ ಇದ್ದರು. ಗುರುಗಳು ಯಾವಾಗಲೂ ಸರಳವಾಗಿಯೇ ಇರುತ್ತಿದ್ದರು. ಅಂತರ್ಮುಖರಾಗಿದ್ದಾಗಲೂ ಅವರ ದರ್ಶನ ಮಾಡಿದ್ದೇನೆ. ಕೆಲವೊಮ್ಮೆ ವಿದ್ಯಾಶಂಕರ ದೇವಸ್ಥಾನಕ್ಕೆ ಪ್ರದಕ್ಷಿಣೆ ಹಾಕಿದ್ದನ್ನು ನಾನು ನೋಡಿದ್ದೇನೆ.

ನಮ್ಮ ಅಣ್ಣ ಅಹೋಬಲ ಸೋಮಯಾಜಿ ಮತ್ತು ಕೇಶವಾಚಾರಿಯವರು ಆರ್ ಯಸ್ ಯಸ್ ಕಾರ್ಯಕರ್ತರಾಗಿದ್ದರು. ಗುರುಗಳು ದೇಹ ಬಿಡುವ ದಿವಸ ಬೆಳಗಿನ ಜಾವ ಹೊಳೆ ಗೋಣಿಲಿ ಅಂಗ ಸಾಧನೆ ಮಾಡಲು ಬಂದಿದ್ದರಂತೆ. ಅಲ್ಲಿ ಮಹಾಬಲ ಭಟ್ಟರು ನದಿಯಲ್ಲಿ ಸೆಣಸುತ್ತಿರುವುದನ್ನು ಕಂಡು ಕೇಶವಾಚಾರಿಯವರು ಮತ್ತು ನಮ್ಮ ಅಣ್ಣನೂ ಸಹ ನದಿಗೆ ಧುಮಿಕಿದರು. ಹತ್ತಿರ ಹೋದಮೇಲೆಯೇ ಗುರುಗಳು ಸಹ ಅಲ್ಲಿ ಇರುವುದು ಕಂಡುಬಂತು. ಮಹಾಬಲಭಟ್ಟರಿಗೆ ಈಜಲು ಬರುತ್ತಿರಲಿಲ್ಲವಂತೆ. ಆದರೂ ಗುರುಗಳು

ನದಿಯಲ್ಲಿ ದೇಹತ್ಯಾಗ ಮಾಡುವುದನ್ನು ತಪ್ಪಿಸಲು ಈಜು ಬಾರದಿದ್ದರೂ ನದಿಗೆ ಹಾರಿ ಶತಪ್ರಯತ್ನ ನಡೆಸಿದರಂತೆ. ಕೊನೆಗೆ ಕೇಶವಾಚಾರಿಯವರು ಗುರುಗಳನ್ನು ಮತ್ತು ಮಹಾಬಲ ಭಟ್ಟರನ್ನು ದಡಕ್ಕೆ ಸೇರಿಸುವಲ್ಲಿ ಯಶಸ್ವಿಯಾದರು. ಆದರೆ ಗುರುಗಳು ಅಷ್ಟರಲ್ಲಾಗಲೇ ದೇಹ ವಿಸರ್ಜಿಸಿದ್ದರಂತೆ. ಮಹಾಬಲ ಭಟ್ಟರ ಹೊಟ್ಟೆಯಲ್ಲಿ ಸೇರಿದ್ದ ನೀರನ್ನು ಹೊರತೆಗೆಯಲಾಯಿತು. ಗುರುಗಳಿಗೂ ಸಹ ಅದೇ ರೀತಿ ಪ್ರಯತ್ನಿಸಲಾಯಿತು. ಆದರೆ ಒಂದು ಹನಿ ನೀರೂ ಸಹ ಬರಲಿಲ್ಲವಂತೆ, ಅಂದರೆ ಒಂದು ಹನಿಯೂ ದೇಹದೊಳಗೆ ಸೇರಿರಲಿಲ್ಲವಂತೆ.

ಗುರುಗಳು ದೇಹಬಿಟ್ಟ ದಿವಸ ನಾನು ಬೆಂಗಳೂರಿನಿಂದ ಶೃಂಗೇರಿಗೆ ಬಂದೆ. ಬರುವ ಹೊತ್ತಿಗೆ ಮಧ್ಯಾಹ್ನ ಆಗಿತ್ತು. ಗುರುಗಳನ್ನು ಅಡ್ಡ ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಊರಿನ ಒಳಗೆ ಉತ್ಸವ ನಡೆಸುತ್ತಿದ್ದರು. ತುಂಬಾ ಜನ ಅಡ್ಡ ಪಲ್ಲಕ್ಕಿಯನ್ನು ಹೊತ್ತಿದ್ದರು. ಬಹಳ ಮಂದಿ ಭಕ್ತರು ಅದರಲ್ಲಿ ಭಾಗವಹಿಸಿದ್ದರು.

ನಾನು ಇಂದಿಗೂ ಅವರ ಫೋಟೋ ಇಟ್ಟುಕೊಂಡು ಪೂಜೆ ಮಾಡುತ್ತೇನೆ. ಅವರ ಬಗ್ಗೆ ನೆನೆಸಿಕೊಂಡರೆ ಬೇರೆಯದೇ ಅನುಭವವಾಗುತ್ತದೆ. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಆಶೀರ್ವಾದದಿಂದಲೇ ನಾನು ಇಂದಿಗೂ ಚನ್ನಾಗಿ ಇದ್ದೇನೆ. ಅವರು ಮಹಾತ್ಮರೇ ಸರಿ.

******************************

## ಗುರುಭಕ್ತರಲ್ಲಿ ಒಬ್ಬರು
## ಮೈಸೂರು

ನಾನು ಮೈಸೂರಿನಲ್ಲಿ ಇದ್ದೇನೆ. ನಮ್ಮ ಮನೆಯಲ್ಲಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಪಾದುಕೆ ಇದೆ. ಅದು ನಮ್ಮ ಮನೆಗೆ ಬಂದ ನಂತರ ಹಲವಾರು ರೀತಿಯಲ್ಲಿ ನನಗೆ ಒಳ್ಳೆಯದಾಗಿದೆ. ನನ್ನ ಗುರು ಸಮಾನರಾದ ಆನಂದಜೀಯವರು ಮೈಸೂರು ಮಹಾರಾಣಿಯವರ ಸಹಾಯಕರಾಗಿ ಇದ್ದರು. ಅವರು ಬೆಂಗಳೂರಿನ ಅರಮನೆಯ ಇಂಚಾರ್ಜ್ ಆಗಿದ್ದರು. ನೇಮ, ನಿಷ್ಠೆ ಇಟ್ಟುಕೊಂಡಿದ್ದ ಬ್ರಹ್ಮಚಾರಿ. ಹೊರಗಡೆ ಊಟ ಮಾಡುತ್ತಿರಲಿಲ್ಲ. ಒಮ್ಮೆ ಮಹಾರಾಣಿಯವರು ಶೃಂಗೇರಿಗೆ ಹೊರಟಿದ್ದರು. ಊಟ ವಸತಿಗೆ ತೊಂದರೆಯಾಗುತ್ತದೆ ಎಂದು ಮಹಾರಾಣಿಯವರು ಆನಂದ್ ಜೀ ಯವರನ್ನು ಶೃಂಗೇರಿಗೆ ಕರೆದುಕೊಂಡು ಹೋಗಲಿಲ್ಲ. ಮಹಾರಾಣಿಯವರು ಶೃಂಗೇರಿಗೆ ತಲುಪಿ ಗುರುಗಳ ದರ್ಶನಕ್ಕೆ ಹೋದರು. ಆದರೆ ಅಲ್ಲಿ ಆನಂದ್ ಜೀ ಯವರನ್ನು ಕರೆದುಕೊಂಡು ಬರುವಂತೆ ಅಪ್ಪಣೆಯಾಯಿತು. ಆನಂದ್ ಜೀ ಯವರನ್ನು ಕರೆತರಲು ಬೆಂಗಳೂರಿಗೆ ಕಾರನ್ನು ಕಳುಹಿಸಲಾಯಿತು. ಕಾರು ಚಾಲಕ, "ನಿಮ್ಮನ್ನು ಶೃಂಗೇರಿಗೆ ಕರೆದುಕೊಂಡು ಬರಲು ಮಹಾರಾಣಿಯವರು ಹೇಳಿದ್ದಾರೆ" ಎಂಬುದಾಗಿ ಆನಂದ್ ಜೀ ಗೆ ಹೇಳಿದರು. ಆದರೆ ಆನಂದ್ ಜೀ ಗೆ ನಂಬಿಕೆ ಬರಲಿಲ್ಲ. "ನನ್ನನ್ನು ಏಕೆ ಅವಶ್ಯವಾಗಿ ಬರಲು ಹೇಳಿ ಕಳುಹಿಸುತ್ತಾರೆ? ನೀವು ಗೊಂದಲಗೊಂಡಿರಬಹುದು" ಎಂದು ಪ್ರಶ್ನೆ ಮಾಡಿದರು. ಆದರೆ ಕಾರು ಚಾಲಕ "ನಿಮ್ಮನ್ನೇ ಕರೆದುಕೊಂಡು ಬರಲು ಹೇಳಿರುವುದು" ಎಂದು ಆತ್ಮ ವಿಶ್ವಾಸದಿಂದ ನುಡಿದರು. ನಂತರ ಆನಂದ್ ಜೀ ಶೃಂಗೇರಿಗೆ ಹೋಗಲು ಒಪ್ಪಿ ಕಾರಿನಲ್ಲಿ ಪ್ರಯಾಣ ಬೆಳಸಿದರು.

ಶೃಂಗೇರಿಗೆ ಹೋದ ನಂತರ ಮಹಾರಾಣಿಯವರನ್ನು ಭೇಟಿ ಮಾಡಿ ಮಡಿಬಟ್ಟೆಯನ್ನೆಲ್ಲಾ ಸಿದ್ಧಗೊಳಿಸಿ ಮಾರನೇ ದಿವಸದ ಗುರುದರ್ಶನಕ್ಕೆ ಸಕಲ ಏರ್ಪಾಟನ್ನೂ ಮಾಡಿದರು. ಮರು ದಿನ ಬೆಳಗ್ಗೆ ಮಹಾರಾಣಿಯವರು ಮತ್ತು ಅನಂದ್ ಜೀ ಯವರು ಇಬ್ಬರೇ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ದರ್ಶನಕ್ಕೆ ಹೋದರು. ಗುರುಗಳನ್ನು ದರ್ಶಿಸಿದ ಆನಂದ್ ಜೀ ಯವರಿಗೆ ಅತ್ಯಂತ ವಿಸ್ಮಯವಾಯಿತು. ಗುರುಗಳನ್ನು ನೇರವಾಗಿ ನೋಡಲು ಸಾಧ್ಯವಾಗಲಿಲ್ಲ. ಪ್ರಭಾವಳಿಯಂತೆ ಕಂಗೊಳಿಸುತ್ತಿದ್ದರು ಗುರುಗಳು. ಆನಂದ್ ಜೀ ಯವರು ಬಾಗಿಲ ಪಕ್ಕದಲ್ಲಿ ನಿಂತುಕೊಂಡು ಮರೆಯಾಗಿ ನೋಡಿದರು. ನಂತರ ಹೇಗೋ ಧೈರ್ಯ ಮಾಡಿ ಗುರುಗಳ ಮುಂದೆ ಹೋಗಿ ನಿಂತುಕೊಂಡರು. ಗುರುಗಳು ಇದ್ದಕ್ಕಿದ್ದಹಾಗೆ ತಮ್ಮ ಪಾದುಕೆಯನ್ನು ಅವರ ಬಳಿ ದೂಡಿದರು. ಹರ್ಷಚಿತ್ತರಾದ ಆನಂದ್ ಜೀ ತಮಗೇ ಅನುಗ್ರಹಿಸಿರುವುದು ಎಂಬುದನ್ನು ಅರಿತು ಅದನ್ನು ತೆಗೆದುಕೊಂಡು ಬಂದರು.

ಕೆಲವು ದಿನ ಪಾದುಕೆಯನ್ನು ಇಟ್ಟುಕೊಂಡು ಪೂಜೆ ಮಾಡುತ್ತಿದ್ದರು. ನಂತರ ಮಕ್ಕಳಾಗದಿರುವ ದಂಪತಿಗೆ ಅದನ್ನು ನೀಡಿದರು. ಆ ಅಂಪತಿಗಳು ಗುರುಗಳ ಪಾದುಕೆಗೆ ಭಕ್ತಿಯಿಂದ ಪೂಜೆ ಸಲ್ಲಿಸಿದ ಮೇಲೆ ಅವರಿಗೆ ಮಕ್ಕಳಾದವು. ನಂತರ ಆ ದಂಪತಿಗಳು ಮಂಗಳೂರಿಗೆ ಹೋದರು. ಸುಮಾರು ೦೬–೨೦೦೫ ನೇ ಇಸವಿಯ ಹೊತ್ತಿಗೆ ಪಾದುಕೆಯನ್ನು ನನಗೆ ನೀಡಿದರು. ಹೀಗಾಗಿ ಪಾದುಕೆಯನ್ನು ನಮ್ಮ ಮನೆಯಲ್ಲಿ ಇಟ್ಟುಕೊಳ್ಳುವ ಅವಕಾಶ ಸಿಕ್ಕಿತು. ಕೆಲವು ದಿನಗಳ ನಂತರ ಆನಂದ್ ಜೀ ಯವರು ನನ್ನನ್ನು ಪಾದುಕೆ ವಾಪಸ್ ನೀಡುವಂತೆ ಕೇಳಿದರು. ಆದರೆ ನಾನು "ನನ್ನ ಆಸ್ತಿಯನ್ನು ಬೇಕಾದರೆ ತೆಗೆದುಕೊಳ್ಳಿ, ನಿಮ್ಮ ದಾಸನಾಗಿ ಬೇಕಾದರೂ ಇರುತ್ತೇನೆ, ಪಾದುಕೆಯನ್ನು ಮಾತ್ರ ಕೇಳಬೇಡಿ ಈ ಜನ್ಮದಲ್ಲಿ ನನಗೆ ಬಿಟ್ಟುಬಿಡಿ" ಎಂದು ಕೇಳಿಕೊಂಡೆ. ನನ್ನ ತಳಮಳವನ್ನು ಗ್ರಹಿಸಿದ ಅವರು ನನ್ನ ಬಳಿಯೇ ಪಾದುಕೆ ಇಟ್ಟುಕೊಂಡಿರಲು ಒಪ್ಪಿದರು. ಅಂದಿನಿಂದಲೂ ನನಗೆ ಗುರುಗಳು ಸಾಧನೆ ಮಾಡಲು ಪ್ರೇರೇಪಿಸುತ್ತಿದ್ದಾರೆ.

ನಾನು ೨೦೦೫ರಲ್ಲಿ ಮೈಸೂರಿನಲ್ಲಿ ಒಂದು ಮನೆಯನ್ನು ತೆಗೆದುಕೊಂಡಿದ್ದೆ. ಸುಮಾರು ೨೦೦೯ರ ಹೊತ್ತಿಗೆ ನನಗೆ ಒಂದು ನೋಟೀಸ್ ಬಂತು. ಎಲ್ಲಾ ದಾಖಲೆಗಳು ನನ್ನ ಬಳಿ ಇದ್ದರೂ ಆ ಮನೆಯನ್ನು ತೊರೆಯಲು ಆದೇಶ ಬಂತು. ನಾನು ಸುಪ್ರೀಂ ಕೋರ್ಟ್ ಮೆಟ್ಟಿಲು ಹತ್ತಿ ಹೋರಾಟ ಮಾಡಿದೆ. ಆ ಸಮಯದಲ್ಲಿ ಹಲವಾರು ರೀತಿಯ ತೊಂದರೆ ಅನುಭವಿಸಿದೆ. ನನ್ನ ನೆರೆ ಹೊರೆಯವರು ನನ್ನ ಸಹಾಯಕ್ಕೆ ನಿಂತರು. ನನ್ನ ಬಳಿ ಒಂದು ಬಿಡಿಗಾಸು ಸಹ ಇರಲಿಲ್ಲ. ನಮ್ಮ ಸ್ನೇಹಿತರುಗಳೇ ಹಣ ನೀಡಿ ಕೋರ್ಟ್ ಕೇಸನ್ನು ನಡೆಸಲು ನೆರವಾದರು. ಕೊನೆಗೂ ೨೦೧೬ರಲ್ಲಿ ಕೋರ್ಟಿನಿಂದ ಮನೆ ಬಿಡುವಂತೆ ಆರ್ಡರ್ ಬಂತು. ನಾನು ನ್ಯಾಯವಾಗಿಯೇ ಇದ್ದರೂ ಮನೆಬಿಡುವ ಪರಿಸ್ಥಿತಿ ಬಂತು. ಮನೆ ಬಿಟ್ಟದ್ದೂ ಆಯಿತು. ನನ್ನ ಬಳಿ ಹಣವು ಇರಲಿಲ್ಲ, ಕೆಲಸವೂ ಇರಲಿಲ್ಲ. ನನ್ನ ಹೆಂಡತಿ ಮತ್ತು ಮಗಳಿಗೆ ಅರೋಗ್ಯ ಸರಿ ಇರಲಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಏನು ಮಾಡಬೇಕಿತ್ತು? ಆದರೆ ಗುರುಗಳ ದಯೆಯಿಂದ ನನಗೆ ಯಾವುದೇ ರೀತಿಯ ತೊಂದರೆಯೂ ಆಗಲಿಲ್ಲ. ನಮ್ಮ ಸ್ನೇಹಿತರೆಲ್ಲಾ ಸೇರಿ ಅಡ್ವಾನ್ಸ್ ಕೊಟ್ಟು ಒಂದು ಬಾಡಿಗೆ ಮನೆ ಕೊಡಿಸಿದರು. ಅವರುಗಳೇ ಎಲ್ಲವನ್ನೂ ಪ್ಯಾಕ್ ಮಾಡಿ ಮನೆಯನ್ನು ಶಿಫ್ಟ್ ಮಾಡಿದರು. ಕೆಲಸವಿಲ್ಲದ ನನಗೆ ಖರ್ಚಿಗೆ ಪ್ರತಿ ತಿಂಗಳು ೪೦೦೦೦ ರೂ ಹಣವನ್ನೂ ನೀಡುತ್ತಿದ್ದರು. ಹಳೆ ಮನೆಯ ಲೋನ್ ಅನ್ನು

ಸಹ ಕಟ್ಟುತ್ತಿದ್ದೆ. ನನಗೆ ಮೂರು ಮಕ್ಕಳು. ಶಾಲೆಯ ಫೀಸ್ ಕಟ್ಟಲೂ ಸಹ ನನ್ನ ಬಳಿ ದುಡ್ಡು ಇರಲಿಲ್ಲ. ಅದೃಷ್ಟವಶಾತ್ ಶಾಲೆಗೆ ಹಣ ಕಟ್ಟುವ ಸಮಯಕ್ಕೆ ಸರಿಯಾಗಿ ನನಗೆ ಒಂದು ಒಳ್ಳೆಯ ಕೆಲಸ ಸಿಕ್ಕಿತು. ಈಗ ನನ್ನ ಸ್ಥಿತಿ ಉತ್ತಮವಾಗಿಯೇ ಇದೆ.

ನಾನು ಕೆಲಸ ಇಲ್ಲದೆ ಹೆಂಡತಿ, ಮೂರು ಮಕ್ಕಳನ್ನು ಸಾಕಬೇಕಿತ್ತು. ಮನೆ ಕಳೆದು ಕೊಂಡಿದ್ದೆ. ಜೀವನ ನಡೆಸಲು ಹಣ ಇರಲಿಲ್ಲ. ಅಂತಹ ಸಂದರ್ಭದಲ್ಲೂ ನಾನು ಧೃತಿಗೆಡಲಿಲ್ಲ. ಈಗಲೂ ನಾನು ಮನೆ ಕಳೆದುಕೊಂಡಿದ್ದರ ಬಗ್ಗೆ ಒಮ್ಮೆಯೂ ಯೋಚಿಸುವುದಿಲ್ಲ. ನೆಮ್ಮದಿಯಾಗಿಯೇ ಇದ್ದೇನೆ. ಇಂತಹ ಆತ್ಮ ಸ್ಥೈರ್ಯ ನನಗೆ ಮೊದಲು ಇರಲಿಲ್ಲ. ಗುರುಗಳ ಪಾದುಕೆ ನಮ್ಮ ಮನೆಗೆ ಬಂದ ನಂತರ ನನಗೆ ಸಂತೋಷ, ನೆಮ್ಮದಿ, ಆತ್ಮ ಸ್ಥೈರ್ಯ ಎಲ್ಲವೂ ಸಿಕ್ಕಿದೆ. ಗುರುಗಳ ಪಾದುಕೆ ನಮ್ಮ ಮನೆಗೆ ಬಂದ ಮೇಲೆ ನಾನು ಹಲವಾರು ಬಾರಿ ಪವಾಡ ಸದೃಶ ರೀತಿಯಲ್ಲಿ ಕಷ್ಟದಿಂದ ಪಾರಾಗಿದ್ದೇನೆ. ಅದನ್ನೆಲ್ಲ ಹೇಳುತ್ತಾ ಕುಳಿತರೆ ೪ ಪುಸ್ತಕ ಬರೆಯಬಹುದು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಕೃಪಾಕಟಾಕ್ಷದಿಂದ ನಾನು ಇಂದು ಸನ್ಮಾರ್ಗದಲ್ಲಿ, ಉತ್ತಮ ಸ್ಥಿತಿಯಲ್ಲಿ, ಸಂತೋಷದಿಂದ, ನೆಮ್ಮದಿಯಾಗಿ ಇದ್ದೇನೆ.

****************************

**ಗಣೇಶ**

**ಲಕ್ಷ್ಮೀಪುರಂ, ಮೈಸೂರು**

ನಮ್ಮ ಮೂಲ ಸ್ಥಳ ಹಿರೇಮಗಳೂರು. ಆದರೆ ನಾವು ಇದ್ದದ್ದೆಲ್ಲಾ ಶಿವಮೊಗ್ಗದಲ್ಲಿ. ನಮ್ಮ ತಂದೆ ದಿ|| ಹೆಚ್. ಸೀತಾರಾಮಭಟ್ಟರು, ಶಿವಮೊಗ್ಗದ ಪ್ರಸಿದ್ಧ ಶಾಲೆಯಾದ ಡಿ ವಿ ಎಸ್ ಪ್ರೌಢಶಾಲೆಯಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದರು. ನಾನು ಹುಟ್ಟಿದ್ದು ೧೯೫೮ರಲ್ಲಿ. ಶಿವಮೊಗ್ಗದ ಸೋಮಯ್ಯ ಬಂಗಲೆಯಲ್ಲಿ ನಮ್ಮ ವಾಸ. ಸುಮಾರು ೧೯೬೨ ರ ಸಮಯ. ನಮ್ಮ ಮನೆಗೆ ಆಗಾಗ್ಗೆ ಪರಮಪೂಜ್ಯ ಶ್ರೀ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಶಿಷ್ಯರಲ್ಲೊಬ್ಬರಾದ ಶ್ರೀ ಶ್ರೀ ಭವಾನೀ ಸ್ವಾಮಿಗಳು ದಯಮಾಡಿಸುತ್ತಿದ್ದರು. ನನಗೆ ಆಗ ತಾನೇ ನಮ್ಮ ಪೂಜ್ಯ ತಂದೆಯವರು ಉಪನಯನವನ್ನು ಮಾಡಿದ್ದರು. ಸ್ವಾಮಿಗಳು ಬಂದಾಗಲೆಲ್ಲಾ ನಾನು ಹಾಗು ನನ್ನಕ್ಕ ಶ್ರೀಮತಿ ಸಾವಿತ್ರೀ, ಸ್ವಾಮಿಗಳ ಪೂಜೆ, ಸ್ನಾನ, ಬಟ್ಟೆ ಮೊದಲಾದವುಗಳಲ್ಲಿ ಅವರಿಗೆ ಸಹಕಾರ ನೀಡುವಂತೆ ನಮ್ಮ ತಂದೆಯವರು ನಮ್ಮನ್ನು ಅಣಿಗೊಳಿಸುತ್ತಿದ್ದರು.

ಬಿಡುವಿನ ವೇಳೆಯಲ್ಲಿ ನಮ್ಮ ತಂದೆ, ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ಬಗ್ಗೆ ಆಗಾಗ್ಗೆ ಏನಾದರೊಂದು ಸದ್ವಿಚಾರವನ್ನು ಹೇಳುತ್ತಿದ್ದರು. ಅಂತಹ ವಿಚಾರಗಳಲ್ಲಿ ನನ್ನ ನೆನಪಿನಲ್ಲಿರುವ ಒಂದು ಘಟನೆ ಹಾಗೂ ನನಗೇ ಆದ ಸ್ವಂತ ಅನುಭವವನ್ನು ಹಂಚಿಕೊಳ್ಳಲು ಬಯಸುತ್ತೇನೆ.

ನಮ್ಮ ತಂದೆಗೆ ಇದ್ದಕ್ಕಿದ್ದ ಹಾಗೆ ಶೃಂಗೇರಿಗೆ ಹೋಗಬೇಕೆಂಬ ಪ್ರೇರಣೆ ಆಗುತ್ತಿತ್ತಂತೆ. ತಮ್ಮ ಶಾಲಾ ಜವಾಬ್ದಾರಿಗಳಿಂದ ಬಿಡುವು ಮಾಡಿಕೊಂಡು ಅಲ್ಲಿಗೆ ಹೋದರೆ "ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ಅಂತರ್ಮುಖರಾಗಿದ್ದಾರೆ, ಯಾರಿಗೂ ದರ್ಶನಕ್ಕೆ ಅವಕಾಶವಿಲ್ಲ" ಎಂಬ ನಿರಾಶಾದಾಯಕ ಉತ್ತರ ಬರುತ್ತಿತ್ತು. ಸರಿ, ದೈವ ಇಚ್ಛಿಸಿದಂತೆ

ಆಗಲಿ ಎಂದುಕೊಂಡು ನಮ್ಮ ತಂದೆಯವರು ಸಂಜೆ ತುಂಗಾನದಿಯಲ್ಲಿ ಸ್ನಾನ ಮಾಡಿ ದಡದಲ್ಲಿ ಸಂಧ್ಯಾವಂದನೆ ಮಾಡುತ್ತಾ ಕುಳಿತಿದ್ದರೆ ತಮ್ಮ ಪರಿಚಾರಕರ ಮೂಲಕ "ಇಂಥ ಕಡೆ ಇಂಥ ಲಕ್ಷಣಗಳಿಂದ ಕೂಡಿದವರೊಬ್ಬರು ಸಂಧ್ಯಾವಂದನೆ ಮಾಡುತ್ತಿದ್ದಾರೆ ಕರೆದುಕೊಂಡು ಬಾ" ಎಂದು ತಮ್ಮ ಸಾನಿಧ್ಯಕ್ಕೆ ಕರೆಸಿಕೊಳ್ಳುತ್ತಿದ್ದರಂತೆ.

ಇನ್ನು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಅಧಿಷ್ಠಾನದಲ್ಲಿ ನನಗಾದ ಅನುಭವವೆಂದರೆ, ೨೦೦೦ ನೇ ಇಸವಿಯಲ್ಲಿ ನಮ್ಮ ತಾಯಿಯವರು ದೈವಾಧೀನರಾದರು. ಬಾಲ್ಯದಿಂದಲೂ ನಾನು ಹಾಗು ನನ್ನ ತಾಯಿಯವರು ಒಬ್ಬರನ್ನೊಬ್ಬರು ಒಂದು ಘಳಿಗೆಯೂ ಬಿಟ್ಟಿರುತ್ತಿರಲಿಲ್ಲ. ಶಾಲಾ, ಕಾಲೇಜು ದಿನಗಳಲ್ಲೂ ಸಹ ನಮ್ಮ ತಾಯಿಯವರೇ ನನ್ನ ಸರ್ವಸಾರಪ್ರಪಂಚವಾಗಿದ್ದರು. ಅವರಿಗೂ ನನ್ನನ್ನು ಬಿಟ್ಟಿರಲು ಆಗುತ್ತಿರಲಿಲ್ಲ, ಕಿರಿಯ ಮಗನೆನ್ನುವುದು ಕಾರಣವಿರಬಹುದು. ಅವರ ಕೊನೆಯ ಕಾಲಗಳಲ್ಲಿ ನನ್ನೊಂದಿಗೆ ರಾಯಚೂರಿನಲ್ಲಿ ಕೆಲವು ದಿನ ಇದ್ದರು. ಅವರು ದೇಹವನ್ನು ಬಿಟ್ಟಾಗ ಅವರಿಗೆ ಸುಮಾರು ೮೨ ವಯಸ್ಸು. ಆರೋಗ್ಯಪೂರ್ಣವಾಗೇ ಇದ್ದರು. ಅವರ ಕೆಲಸ ಅವರೇ ಮಾಡಿಕೊಳ್ಳುತ್ತಿದ್ದರೂ ಎಷ್ಟೋ ಕೆಲಸಗಳನ್ನು ನಾನೇ ನಿರ್ವಹಿಸಿಕೊಡುತ್ತಿದ್ದೆ. ಕೊನೆಯ ಎರಡು ತಿಂಗಳಿನಲ್ಲಿ ಹೊನ್ನಾಳಿಯಲ್ಲಿರುವ ನನ್ನ ದೊಡ್ಡಕ್ಕನ ಮನೆಗೆ ಹೋದವರು ವಾಪಸ್ಸು ಬರಲಿಲ್ಲ. ಅವರು ದೈವಾಧೀನರಾದ ಮೇಲೆ ನನಗೆ ಪ್ರಪಂಚವೇ ಬೇಡವೆನಿಸುತ್ತಿತ್ತು. ಎಲ್ಲವನ್ನೂ ಬಿಟ್ಟು ಎಲ್ಲಾದರೂ ಬಹು ದೂರ ಏಕಾಂತವಾಗಿ ಕೆಲವು ದಿನ ಇರಬೇಕೆನಿಸುತ್ತಿತ್ತು.

ಸರ್ಕಾರಿ ನೌಕರಿಯಲ್ಲಿದ್ದ ನಾನು ತಕ್ಷಣಕ್ಕೆ ಎಲ್ಲವನ್ನೂ ಬಿಟ್ಟು ಹೋಗಲು ಆಗುತ್ತಿರಲಿಲ್ಲ. ಇದ್ದ ಬದ್ದ ರಜೆಯನ್ನೆಲ್ಲಾ ಹಾಕಿ ಸೀದಾ ಶೃಂಗೇರಿಗೆ ಹೋದೆ. ಅಲ್ಲಿ ದಿವಸವೂ ತುಂಗಾನದಿಯಲ್ಲಿ ಸ್ನಾನ, ಭಗವತಿ ಶಾರದಾಂಬೆಯ ಮುಂದೆ ಕುಳಿತು ಅಳುವುದು ಇಷ್ಟೇ ನನ್ನ ದಿನಚರಿಯಾಗಿತ್ತು. ಎಷ್ಟೋ ದಿವಸ ನನಗೆ ಅರಿವಿಲ್ಲದೆಯೇ ನಾನು ಶಾರದೆಯ ದೇಗುಲದಿಂದ ಹೊರಟು ನದಿಯನ್ನು ದಾಟಿ ನರಸಿಂಹವನದಲ್ಲಿರುವ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಅಧಿಷ್ಠಾನದ ಮುಂದೆ ಕುಳಿತಿರುತ್ತಿದ್ದೆ. ಗುರುಗಳ ಸಾನಿಧ್ಯದಲ್ಲಿ ನನಗೆ ಏನೋ ಒಂದು ತರಹದ ಸೌಖ್ಯ, ನೆಮ್ಮದಿ ಸಿಗುತ್ತಿತ್ತು.

ನನ್ನ ದುಃಖ ದುಮ್ಮಾನಗಳೇನೇ ಇದ್ದರೂ ಕರ್ತವ್ಯದ ಕರೆಯು ನನ್ನನ್ನು ಬಾಧಿಸುತ್ತಿತ್ತು. ರಜೆ ಮುಗಿಯುವ ಕೊನೆ ದಿವಸ ರಾತ್ರಿ ೯:೩ಂಕ್ಕೆ ಶೃಂಗೇರಿಯಿಂದ ನೇರವಾಗಿ ರಾಯಚೂರಿಗೆ ಬಸ್ಸಿತ್ತು. ಅದರಲ್ಲಿ ಹೊರಡುವುದೆಂದು ನಿಶ್ಚಯಿಸಿ ಅಂದು ಸಂಜೆ ತುಂಗಾ ನದಿಯಲ್ಲಿ ಸ್ನಾನ ಮಾಡಿಕೊಂಡು ಶಾರದಾಂಬೆಯ ದರ್ಶನ ಮಾಡಿ ನೇರವಾಗಿ ನರಸಿಂಹವನಕ್ಕೆ ಬಂದೆ. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಅಧಿಷ್ಠಾನಕ್ಕೆ ದೀರ್ಘದಂಡ ನಮಸ್ಕಾರ ಮಾಡಿ ಏಳುತ್ತಿದ್ದೆ. ಇದ್ದಕ್ಕಿದ್ದ ಹಾಗೆ ಅಧಿಷ್ಠಾನ ಮಂದಿರದ ಒಳಗಿನಿಂದ ಒಂದು ರೀತಿಯ ಅಶರೀರವಾಣಿಯು "ಯಾಕಪ್ಪಾ ದುಃಖಪಡ್ತೀಯಾ ಜಗನ್ಮಾತೆ ಸಿಗ್ತಾಳೆ, ಅವಳ ಅನುಗ್ರಹ ನಿನಗಿದೆ" ಎಂದು ಹರಸಿದಂತಾಯಿತು. ಅಲ್ಲಿಯವರೆಗೂ ನಾನು ಪೂಜೆ, ಜಪ, ಹೋಮ ಮೊದಲಾದ ಧಾರ್ಮಿಕ ಕಲಾಪಗಳಲ್ಲಿ ನಿಷ್ಠೆಯಿಂದ ಭಾಗವಹಿಸುತ್ತಿದ್ದೆ. ಆದರೆ ಗುರುಗಳ ಅನುಗ್ರಹವಾದ ಕ್ಷಣದಿಂದ ಏನಾದರೂ ಆಗಲಿ ಇದೇ ಜನ್ಮದಲ್ಲಿ ಆತ್ಮಸಾಕ್ಷಾತ್ಕಾರಕ್ಕೆ ತೀವ್ರವಾಗಿ ಪ್ರಯತ್ನ ಮಾಡಬೇಕೆಂಬ ಇಚ್ಛೆ ಉಂಟಾಗಿ ಸೂಕ್ತವಾದ ಸ್ಥಳವನ್ನು ಹುಡುಕಲು ಶುರು ಮಾಡಿದೆ. ಎಲ್ಲಿ ಹುಡುಕಿದರೂ ಮನಸ್ಸಿಗೆ ಸಮಾಧಾನವಿಲ್ಲದಾಯ್ತು. ಹಾಗೆ

ಸುಮಾರು ಎರಡು ವರ್ಷ ಕಳದೇ ಹೋಯ್ತು.

ಸಂಸ್ಥೆಯಲ್ಲಿ ಸ್ವಯಂ ನಿವೃತ್ತಿ ಯೋಜನೆ ಬಂದು ೨೦೦೩ರಲ್ಲಿ ನೌಕರಿಯಿಂದ ಬಿಡುಗಡೆ ಹೊಂದಿದೆ. ಯಾರಾದರೂ ಸಮರ್ಥ ಗುರುಗಳಿಂದ ಪ್ರಸ್ಥಾನತ್ರಯ (ಭಗವದ್ಗೀತೆ, ಬ್ರಹ್ಮಸೂತ್ರ ಹಾಗು ಉಪನಿಷತ್ತುಗಳು) ಪಾಠ ಮಾಡಿಸಿಕೊಂಡು ಅದರಿಂದ ಸಿಗುವ ಮನಃಪಕ್ವತೆಯ ಆಧಾರದ ಮೇಲೆ ಸಂನ್ಯಾಸ ತೆಗೆದುಕೊಂಡು ಸಾಧನೆಗೆ ಹಿಮಾಲಯಕ್ಕೆ ಹೊರಡುವುದು ಎಂದು ತೀರ್ಮಾನಿಸಿದ್ದೆ. ಹೀಗೆ ಗುರುವನ್ನು ಹುಡುಕುತ್ತಿದ್ದಾಗ ನಮ್ಮ ಮನೆಯ ಪುರೋಹಿತರಾದ ವೇ।ಬ್ರ।ಶ್ರೀ ಮಂಜುನಾಥ ಭಟ್ಟರ ಮಾರ್ಗದರ್ಶನದಂತೆ ಮೈಸೂರಿನಲ್ಲಿರುವ ಪೂಜ್ಯ ಶ್ರೀ ಕೆ ಎಲ್ ಶಂಕರನಾರಾಯಣ ಜೋಯಿಸರ ಪರಿಚಯ ಮಾಡಿಕೊಂಡೆ. ಅವರಲ್ಲಿ ನನ್ನ ಮನದಾಳದ ಇಚ್ಛೆಯನ್ನು ಅರುಹಿದೆ. ನನ್ನ ಮಾತುಗಳನ್ನು ಕೇಳಿ ಅವರು "ನಿಮಗೆ ಸಂನ್ಯಾಸ ಬೇಕಾ? ಸಾಧನೆ ಬೇಕಾ?" ಎಂದು ಕೇಳಿದರು. ಆ ಒಂದು ಮಾತು ನನ್ನ ಜೀವನದ ಪೂರ್ಣ ನೋಟವನ್ನೇ ಬದಲಿಸಿಬಿಟ್ಟಿತು. "ಸಂನ್ಯಾಸ ತೆಗೆದುಕೊಳ್ಳುವ ಉದ್ದೇಶವೇ ಅಧ್ಯಾತ್ಮ ಸಾಧನೆಗೆ, ನನಗೆ ಸಾಧನೆಯೇ ಮುಖ್ಯ" ಎಂದೆ. "ಹಾಗಾದರೆ ಸಾಧನೆಗೆ ಇಲ್ಲೇ ಅನುಕೂಲ ಸಿಗುವುದಾದರೆ ಇಲ್ಲೇ ಇರುತ್ತೀರಾ?" ಎಂದು ಕೇಳಿದರು. ಸಂತೋಷವಾಗಿ ಇರುತ್ತೇನೆ ಎಂದೆ. ಅವರ ಅನುಗ್ರಹ ಮಾರ್ಗದರ್ಶನದಂತೆ ಮೈಸೂರಿನ ಅಷ್ಟಾಂಗಯೋಗವಿಜ್ಞಾನ ಮಂದಿರದ ಪರಿಚಯವಾಗಿ ಆ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಮಾತೆಯವರ ದಿವ್ಯಾನುಗ್ರಹಕ್ಕೆ ಪಾತ್ರನಾಗುವ ಸೌಭಾಗ್ಯ ನನಗೆ ಒದಗಿ ಬಂತು. ಶ್ರೀ ಮಾತೆಯನ್ನು ಮೊಟ್ಟ ಮೊದಲಬಾರಿಗೆ ನೋಡಿದಾಗ ಶೃಂಗೇರಿಯಲ್ಲಿ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ಅಧಿಷ್ಠಾನದಲ್ಲಿ ಕೇಳಿದ್ದ ಅಶರೀರ ವಾಣಿ "ಜಗನ್ಮಾತೆ ಸಿಕ್ತಾಳೆ" ಎಂಬುದು ಪ್ರತ್ಯಕ್ಷವಾಗಿ ನೆರವೇರಿದಂತೆ ಅನಿಸಿತು. ಅಂದಿನಿಂದ ಶ್ರೀಮಾತೆಯವರ ದಿವ್ಯಾನುಗ್ರಹದಲ್ಲಿ ನೆಮ್ಮದಿಯಾಗಿ ಸಾಧನಾ ಮಾರ್ಗದಲ್ಲಿದ್ದೇನೆ. ಇಂದು ನನಗೆ ದೊರಕಿರುವ ಸಮಾಧಾನ, ಸುಖ, ಶಾಂತಿ ಎಲ್ಲಕ್ಕೂ ಮೂಲ ಕಾರಣ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ದಿವ್ಯಾನುಗ್ರಹ ಎಂದರೆ ಅತಿಶಯೋಕ್ತಿಯಲ್ಲ.

********************************

**ಹೆಚ್ ಪಿ ಲಕ್ಷ್ಮೀನಾರಾಯಣ**
**ಹಾಲ್ಕುರ್ಕೆ, ತಿಪಟೂರು**

ಹಾಲ್ಕುರ್ಕೆ ನಮ್ಮ ಊರು. ನಮ್ಮ ತಂದೆಯ ಹೆಸರು ಪುಟ್ಟಯ್ಯ ಮತ್ತು ಅಜ್ಜನ ಹೆಸರು ಗುಂಡಪ್ಪ (ಸುಂಕದ ಮಾದವಯ್ಯ) ಎಂದು. ೧೯೩೭ರಲ್ಲಿ ನಾನು ಜನಿಸಿದೆ. ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ೧೯೨೪ನೇ ಇಸವಿಯಲ್ಲಿ ನಮ್ಮ ಊರಿಗೆ ಬಂದು ೭ ದಿವಸ ಇದ್ದರಂತೆ. ಯಾವ ಜನ್ಮದ ಪುಣ್ಯದ ಫಲವೋ ನಮ್ಮ ಮನೆಯಲ್ಲೇ ಅವರ ವಾಸ್ತವ್ಯಕ್ಕೆ ಏರ್ಪಾಟಾಗಿತ್ತು. ನಮ್ಮ ಅಜ್ಜ ಮುಂದುಗಡೆ ಮನೆಯನ್ನು ಗುರುಗಳಿಗೆ ಬಿಟ್ಟುಕೊಟ್ಟಿದ್ದರಂತೆ. ಗುರುಗಳು ಪ್ರತಿ ದಿವಸ ಅಲ್ಲಿ ಪೂಜೆ ನಡೆಸುತ್ತಿದ್ದರು. ಮಾಲೇಕಲ್ಲು ತಿರುಪತಿಯಲ್ಲಿದ್ದ ಶ್ರೀ ರಾಮಕೃಷ್ಣ ಸರಸ್ವತೀ ಎಂಬ ಸಂನ್ಯಾಸಿಗಳು ನಮ್ಮ ಮನೆಗೆ ಬರುತ್ತಿದ್ದರು. ಅವರ ಅಧಿಷ್ಠಾನವು ನಮ್ಮ ಮನೆಯಲ್ಲಿ ಇದೆ. ಅದನ್ನು ನೋಡಿದ ಜಗದ್ಗುರುಗಳು, ಇವರು ಮಹಾತ್ಮರು, ಇವರ ಪೂಜೆಯನ್ನು ಮಾಡಿ ಎಂದು ಹೇಳಿದ್ದರಂತೆ.

ಒಂದು ದಿವಸ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು ನಮ್ಮ ಊರಿನಿಂದ ೩ ಮೈಲಿ ದೂರದಲ್ಲಿರುವ ಸಾರ್ಥವಲ್ಲಿಗೆ ಹೋಗಿದ್ದರು. ನನ್ನ ಹೆಂಡತಿಯ ಅಜ್ಜ ಶಿವರಾಮಯ್ಯ ಎನ್ನುವವರು ಅದೇ ಊರಿನಲ್ಲಿ ಇದ್ದರು. ಅವರೇ ಮುಂದೆ ನಿಂತು ಗುರುಗಳನ್ನು ತಮ್ಮ ಊರಿಗೆ ಬರುವಂತೆ ಎಲ್ಲಾ ಏರ್ಪಾಟನ್ನು ಮಾಡಿದರಂತೆ. ಅಲ್ಲಿಗೆ ಬಂದ ನಂತರ ಗುರುಗಳು ಪೂಜೆ ನಡೆಸಿದರು. ಎಲ್ಲಾ ಸುಸೂತ್ರವಾಗಿ ನಡೆದು ತೀರ್ಥ ಕೊಡುವ ಸಮಯ ಬಂತು. ಪ್ರತಿಯೊಬ್ಬರೂ ಸರತಿ ಸಾಲಿನಲ್ಲಿ ನಿಂತು ತೀರ್ಥವನ್ನು ಪಡೆದು ಗುರುಗಳ ಆಶೀರ್ವಾದವನ್ನು ಪಡೆಯುತ್ತಿದ್ದರು. ಅದರಲ್ಲಿ ಶಿವರಾಮಯ್ಯನವರು ಒಬ್ಬರು. ಹಾಗೆ ತೀರ್ಥ ಕೊಡುತ್ತಾ ಶಿವರಾಮಯ್ಯನವರ ಸರತಿ ಬಂತು. ಆದರೆ ಗುರುಗಳು ಅವರಿಗೆ ತೀರ್ಥ ಕೊಡದೆ ಮನೆಗೆ ತೆರಳುವಂತೆ ಸೂಚಿಸಿದರು. ನಂತರ ತಮ್ಮ ಭಕ್ತರಿಗೆ ತೀರ್ಥ ಕೊಡಲು ಮುಂದುವರಿಸಿದರು. ಶಿವರಾಮಯ್ಯನವರಿಗೆ ತಾವು ಏನೋ ತಪ್ಪು ಮಾಡಿರುವುದಕ್ಕೆ ಗುರುಗಳು ನನಗೆ ತೀರ್ಥವನ್ನು ಕೊಟ್ಟಿಲ್ಲ ಎಂದು ತಪ್ಪು ಅರ್ಥಮಾಡಿಕೊಂಡು ಕಣ್ಣೀರು ಸುರಿಸುತ್ತಾ ನಿಂತರು. ಊರ ಜನರೆಲ್ಲ ಅವರ ಗುಣಗಾನ ಮಾಡಿ “ಶಿವರಾಮಯ್ಯನವರು ಬಹಳ ಒಳ್ಳೆಯವರು ತೀರ್ಥ ಕೊಡದೆ ಇದ್ದದ್ದರಿಂದ ಅವರು ಬಹಳ ಬೇಸರಗೊಂಡಿದ್ದಾರೆ” ಎಂದು ಹೇಳಿ ತೀರ್ಥಕೊಡದೆ ಇರುವ ಕಾರಣವೇನೆಂದು ಗುರುಗಳಲ್ಲಿ ವಿನಮ್ರವಾಗಿ ಕೇಳಿಕೊಂಡರು.

ಅದಕ್ಕೆ ಗುರುಗಳು "ಅವರಿಗೆ ಆಶೌಚ ಬಂದಿದೆ, ಅವರ ಅಳಿಯ ತೀರಿಹೋಗಿದ್ದಾರೆ. ಇನ್ನು ಸ್ವಲ್ಪ ಹೊತ್ತಿನಲ್ಲೇ ಆ ವಿಷಯವನ್ನು ಹೊತ್ತು ಒಬ್ಬರು ತಂತಿ ತರುತ್ತಾರೆ. ಚಿಂತಿಸಬೇಡಿ ಮೂರು ದಿನಗಳ ನಂತರ ಅವರಿಗೆ ತೀರ್ಥವನ್ನು ಕೊಡುತ್ತೇನೆ ಎಂದರಂತೆ. ಕೆಲ ಹೊತ್ತಿನಲ್ಲೇ ಒಬ್ಬರು ಒಂದು ಚೀಟಿಯನ್ನು ತಂದು ಅದನ್ನು ಶಿವರಾಮಯ್ಯನವರಿಗೆ ನೀಡಿ ಅವರ ಅಳಿಯ ಶಾನಭೋಗ ಸುಬ್ಬರಾಯರು ತೀರಿಹೋದ ವಿಷಯವನ್ನು ಹೇಳಿದರಂತೆ. ಮೂರು ದಿನದ ಸೂತಕ ಕಳೆದ ನಂತರ ಶಿವರಾಮಯ್ಯನವರು ನಮ್ಮ ಮನೆಯಲ್ಲಿ ಗುರುಗಳ ದರ್ಶನ ಮಾಡಿ ಅವರ ಆಶೀರ್ವಾದವನ್ನು ಪಡೆದರಂತೆ.

ಹೊನ್ನವಳ್ಳಿಯಿಂದ ಹಲವಾರು ಜನರು ಮತ್ತು ಸುತ್ತಮುತ್ತಲಿನ ರೈತರೆಲ್ಲ ಗುರುಗಳ ದರ್ಶನಕ್ಕೆ ಬರುತ್ತಿದ್ದರು. ಬ್ರಿಟಿಷ್ ಸರ್ಕಾರದವರು ಕುಶಾಲು ತೋಪನ್ನು ಹಾರಿಸಿ ಗುರುಗಳಿಗೆ ಗೌರವವನ್ನು ಸೂಚಿಸುತ್ತಿದ್ದರಂತೆ. ಡೆಪ್ಯುಟಿ ಕಮಿಷನರ್ ಸಹ ಬರುತ್ತಿದ್ದರು ಎಂದು ಸಿದ್ದಪ್ಪ ಎನ್ನುವ ಒಬ್ಬ ರೈತರು ನನಗೆ ಹೇಳಿದ್ದರು.

ಆಲೂರಿನ ಶಿವರಾಮ ಜೋಯಿಸರು ಎಂಬ ಒಬ್ಬ ಪುರೋಹಿತರು ಮತ್ತು ನಮ್ಮ ತಂದೆ ಪುಟ್ಟಯ್ಯನವರು ಒಂದು ಘಟನೆಯನ್ನು ನನಗೆ ಹೇಳಿದ್ದು ಈಗಲೂ ನನಗೆ ನೆನಪು ಇದೆ. ನಮ್ಮ ಅಜ್ಜ ಮೈಸೂರು ಅರಮನೆಗೆ ಗೌರವ ಸದಸ್ಯರಾಗಿದ್ದರು. ನಮ್ಮ ಅಜ್ಜನಿಗೆ ಕೋಪ ಜಾಸ್ತಿ ಬರುತ್ತಿತ್ತಂತೆ, ಅವರ ಎದುರಿಗೆ ನಿಂತು ಯಾರೂ ಮಾತನಾಡುತ್ತಿರಲಿಲ್ಲವಂತೆ. ಅವರು ಒಬ್ಬ ಆಳಿಗೆ ಒಂದು ಕೆಲಸವನ್ನು ಕೊಟ್ಟಿದ್ದರು. ಆದರೆ ಆಳು ಆ ಕೆಲಸವನ್ನು ಮಾಡಿರಲಿಲ್ಲ. ನಮ್ಮ ಅಜ್ಜ ಹೊರಗೆ ನಿಂತಿದ್ದರು ಮತ್ತು ಗುರುಗಳು ಸ್ನಾನಕ್ಕೆ ತೆರಳಿದ್ದರು. ನಮ್ಮ ಅಜ್ಜ ಆ ಆಳಿಗೆ ಅವಾಚ್ಯ ಶಬ್ದಗಳಿಂದ ಬೈದರಂತೆ. ಇದನ್ನು ಕೇಳಿಸಿಕೊಂಡ ಗುರುಗಳು "ಗುಂಡಪ್ಪ" ಎಂದು ಕೂಗಿ ಕರೆದು ಬುದ್ಧಿವಾದ ಹೇಳಿದರಂತೆ. "ಆತನೂ ನಮ್ಮಂತೆಯೇ ಮನುಷ್ಯನು. ಅವಾಚ್ಯ ಶಬ್ದಗಳಿಂದ ನಿಂದಿಸುವುದು ಮಹಾ ಪಾಪ. ಹೋಗಿ

ಸಚೇಲ ಸ್ನಾನವನ್ನು (ಉಟ್ಟ ಬಟ್ಟೆಯಲ್ಲಿ ಸ್ನಾನ ಮಾಡುವುದು) ಮಾಡಿಕೊಂಡು ಬಂದು ಪ್ರಾಯಶ್ಚಿತ್ತವಾಗಿ ಗಾಯತ್ರೀ ಜಪವನ್ನು ಮಾಡು" ಎಂದು ಹೇಳಿದರು. ಗುರುಗಳೂ ಸಹ ಮತ್ತೆ ಸ್ನಾನ ಮಾಡಿಕೊಂಡು ಬಂದರಂತೆ. ನಮ್ಮ ಅಜ್ಜ ಜನಿವಾರ ಬದಲಿಸಿ ಬಟ್ಟೆ ವಿಸರ್ಜಿಸಿ ಎಲ್ಲಾ ಆದಮೇಲೆ ಗುರುಗಳು ನಮ್ಮ ಅಜ್ಜನನ್ನು ಕರೆದು "ಸಿಟ್ಟು ಬಿಡಬೇಕು" ಎಂದು ಬುದ್ಧಿವಾದ ಹೇಳಿದರಂತೆ. ನಂತರ ನಮ್ಮ ಅಜ್ಜ ಒಂದು ದಿವಸವೂ ಅವಾಚ್ಯ ಶಬ್ದದಿಂದ ಯಾರನ್ನೂ ನಿಂದಿಸುತ್ತಿರಲಿಲ್ಲವಂತೆ. ಗುರುಗಳ ಉಪದೇಶವಾದ ಮೇಲೆ ಸಿಟ್ಟೂ ಸಹ ಕಮ್ಮಿಯಾಯಿತಂತೆ.

೧೯೩೧ರಲ್ಲಿ ಶ್ರೀ ಅಭಿನವ ವಿದ್ಯಾತೀರ್ಥ ಸ್ವಾಮಿಗಳ ಸಂನ್ಯಾಸ ಸ್ವೀಕಾರ ಕಾರ್ಯಕ್ರಮಕ್ಕೆ ನಮ್ಮ ತಂದೆಯವರಿಗೆ ಶೃಂಗೇರಿಮಠದಿಂದ ಶ್ರೀಮುಖ ಕಳುಹಿಸಿದ್ದರು. ಈಗಲೂ ಆ ಪತ್ರ ನಮ್ಮ ಮನೆಯಲ್ಲಿ ಇದೆ.

೧೯೫೩ ನೇ ಇಸವಿಯಲ್ಲಿ ಶೃಂಗೇರಿಯಲ್ಲಿ ಅತಿರುದ್ರ ಸ್ವಾಹಾಕಾರ ಮಹಾಯಾಗ ನಡೆಯಿತು. ನಾನು ನಮ್ಮ ಅಪ್ಪ, ಅಮ್ಮ ಮತ್ತು ಬಂಧುಗಳು ಎಲ್ಲರೂ ಶೃಂಗೇರಿಗೆ ಹೋಗಿದ್ದೆವು. ಅಲ್ಲಿ ಶಿವಮೊಗ್ಗದ ಕೃಷ್ಣ ಟಾಕೀಸ್‌ನ ಮಾಲೀಕರು ಆದ ಕೃಷ್ಣನ್ ಅಯ್ಯರ್ ಮತ್ತು ಸುಂದರಂ ಅಯ್ಯರ್ ಎಂಬ ಅಣ್ಣ ತಮ್ಮಂದಿರು ಬಂದಿದ್ದರು. ಯಾಗ ಮುಗಿದ ಮೇಲೆ ನದಿಯ ಹತ್ತಿರ ಹೋಗಿದ್ದ ಇವರಿಬ್ಬರ ಮಕ್ಕಳೂ ಸುಳಿಯಲ್ಲಿ ಸಿಲುಕಿ ಸತ್ತುಹೋದರು. ಅದನ್ನು ಗುರುಗಳಿಗೆ ಅವರ ತಂದೆ ತಿಳಿಸಿದರು. ಅದಕ್ಕೆ ಗುರುಗಳು "ಅಮ್ಮನವರು ಆ ಇಬ್ಬರು ಮಕ್ಕಳಿಗೂ ಮುಕ್ತಿ ಸಿಗಲೆಂದೇ ಇಲ್ಲಿಗೆ ಕರೆಸಿಕೊಂಡಿದ್ದಾರೆ" ಎಂದರು.

ಗುರುಗಳು ದೇಹ ಬಿಟ್ಟ ವಿಷಯ ನಮಗೆ ತಲುಪಿದ್ದು ತಡವಾಗಿ. ಆದ್ದರಿಂದ ಅವರು ದೇಹಬಿಟ್ಟಾಗ ನಾವು ಶೃಂಗೇರಿಗೆ ಹೋಗಲು ಆಗಲಿಲ್ಲ. ಗುರುಗಳು ನಮ್ಮ ಮನೆಗೆ ಬಂದು ಹೋದಮೇಲೆ ನಮಗೆ ಎಲ್ಲಾ ರೀತಿಯಲ್ಲೂ ಒಳ್ಳೆಯದಾಗಿದೆ. ನಮಗೆ ೫೦ ಎಕರೆ ಜಮೀನು ಇತ್ತು. ಅದರಲ್ಲಿ ನಮಗೆ ಅವಶ್ಯಕತೆಗೆ ಎಷ್ಟು ಬೇಕೋ ಅಷ್ಟು ಉಳಿಸಿಕೊಂಡು ಮಿಕ್ಕಿದ್ದನ್ನು ಮಾರಿದ್ದೇವೆ. ಗುರುಗಳ ದಯೆಯಿಂದ ಎಲ್ಲರೂ ಚೆನ್ನಾಗಿ ಇದ್ದೇವೆ.

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

# ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ
## ❀ ನುಡಿಮುತ್ತುಗಳು ❀

೧. ಈ ಜಗತ್ತಿನಲ್ಲಿ ಯಾರೂ ಯಾರನ್ನೂ ತಿದ್ದಲು ಸಾಧ್ಯವಿಲ್ಲ. ಒಂದು ವೇಳೆ ನಾವು ಯಾರನ್ನಾದರು ತಿದ್ದುತ್ತೇವೆ ಎಂದುಕೊಂಡರೆ ಅದು ನಮ್ಮ ಮೂರ್ಖತನ. ನಮ್ಮನ್ನು ನೋಡಿ ಬೇರೆಯವರು ತಿದ್ದಿಕೊಳ್ಳುವಂತೆ ನಾವು ಬದುಕಬೇಕು ಅಷ್ಟೇ.

೨. ಸಂತೋಷ ಮತ್ತು ಮನಃಶಾಂತಿಗೆ ಧರ್ಮಾಚರಣೆಯೇ ಕಾರಣ. ನಿಮ್ಮ ಪೂರ್ವಿಕರು ಮನಃಶಾಂತಿ ಮತ್ತು ಸಂತೋಷದಿಂದ ಇದ್ದರು ಎಂದರೆ ಅದಕ್ಕೆ ಅವರ ಧರ್ಮಾಚರಣೆಯೇ ಕಾರಣ. ಯಾವಾಗ ನೀವು ಸಂಪೂರ್ಣವಾಗಿ ಧರ್ಮವನ್ನು ತಿರಸ್ಕರಿಸುತ್ತೀರೋ ಅಲ್ಲಿಂದ ನಿಮ್ಮ ಸಂಕಷ್ಟಗಳು ಶುರುವಾಗುತ್ತದೆ.

೩. ನಿಮ್ಮ ತಪ್ಪುಗಳನ್ನು ಹುಡುಕಿ ನೀವು ಸರಿಮಾಡಿಕೊಳ್ಳಿ. ನಿಮ್ಮ ಜೀವನವನ್ನು ದೈಹಿಕ, ಮಾನಸಿಕ ಮತ್ತು ಅಧ್ಯಾತ್ಮಿಕವಾಗಿ ಸದ್ಗುಣ, ಶುದ್ಧ, ಒಳ್ಳೆಯ ಮಾರ್ಗದಲ್ಲಿ ಇರುವಂತೆ ನಿಯಂತ್ರಿಸಿ. ನಂತರವಷ್ಟೇ ನೀವು ನಿಜವಾದ ಶಾಶ್ವತ ಶಾಂತಿ ಮತ್ತು ಆನಂದವನ್ನು ಅನುಭವಿಸಬಹುದು.

೪. ವಿಶ್ವವು ನಿಸ್ವಾರ್ಥ (ನಿಷ್ಕಾಮ್ಯ ಕರ್ಮ) ಸೇವೆಮಾಡಲು ಒಳ್ಳೆಯ ತರಬೇತಿ ಮೈದಾನವಾಗಿದೆ. ನೀವು ಶುದ್ಧ, ನಿಸ್ವಾರ್ಥ ಸೇವೆಯನ್ನು ಮಾಡುವುದರಿಂದ ಎಲ್ಲಾ ಕಲ್ಮಶಗಳಿಂದ ಮುಕ್ತರಾಗುತ್ತೀರಿ ಮತ್ತು ದೇವರ ಸಾಕ್ಷಾತ್ಕಾರಕ್ಕೆ ಯೋಗ್ಯರಾಗುತ್ತೀರಿ.

೫. ಜ್ಞಾನದ ಸಾಮಗ್ರಿಗಳು ನಮಗೆ ಲಭ್ಯವಿದೆ. ನಮಗೆ ಕಲಿಯುವ ಸಾಮರ್ಥ್ಯವೂ ಇದೆ. ಶಿಕ್ಷಕರು ನಮಗೆ ಬೋಧಿಸಲು ಇದ್ದಾರೆ. ಆದರೂ ಮನುಷ್ಯನು ಅಜ್ಞಾನದ ಕತ್ತಲೆಯಲ್ಲಿಯೇ ಜೀವಿಸಲು ಬಯಸುತ್ತಾನೆ. ಮನುಷ್ಯರೊಳಗೆ ಆನಂದದ ಸಾಗರ ಅಸ್ತಿತ್ವದಲ್ಲಿದೆ. ಆದರೂ ಅವರು ದುಃಖ

ಮತ್ತು ನೋವು ತುಂಬಿರುವ ಜೀವನವನ್ನು ಇಷ್ಟಪಡುತ್ತಾರೆ. ಇದು ಮಾನವ ಜೀವನದ ದುರಂತವಾಗಿದೆ.

೬. ಸಂತೋಷವು ಮನಸ್ಸಿನ ಒಂದು ಸ್ಥಿತಿಯಾಗಿದೆ ಮತ್ತು ಬಾಹ್ಯ ಆಸ್ತಿಗಳ ಗುಣಮಟ್ಟ ಅಥವಾ ಪ್ರಮಾಣವನ್ನು ಅವಲಂಬಿಸಿಲ್ಲ. ಒಬ್ಬ ವ್ಯಕ್ತಿ ಮೂರು ಲೋಕದೊಡೆಯನಾದರೂ ಅತೃಪ್ತಿಯಿಂದಿರಬಹುದು, ಮತ್ತೊಬ್ಬನು ಬಡವನಾದರೂ ಸಂತೋಷದಿಂದಿರಬಹುದು.

೭. ಭಕ್ತನು ದೇವರನ್ನು ನಿರ್ದಿಷ್ಟ ರೂಪ ಮತ್ತು ಹೆಸರಿನಿಂದ ಹೊರಹಾಕಲು ಅಸಮರ್ಥನಾಗಿರುವುದೇ ಧಾರ್ಮಿಕ ಘರ್ಷಣೆಗಳು, ಜಗಳಗಳು ಹುಟ್ಟಿಕೊಳ್ಳುವುದಕ್ಕೆ ಕಾರಣ. ಎಲ್ಲಾ ದೇವರುಗಳು ಒಂದೇ ಮತ್ತು ಎಲ್ಲ ಮಾರ್ಗಗಳು ದೇವರಲ್ಲಿಗೇ ಕೊಂಡೊಯ್ಯುತ್ತವೆ ಎನ್ನುವುದನ್ನು ನೀವು ಅರ್ಥ ಮಾಡಿಕೊಂಡರೆ, ನಿಮ್ಮ ಅಮೂಲ್ಯವಾದ ಜೀವನವನ್ನು ನೀವು ಎಂದಿಗೂ ಧಾರ್ಮಿಕ ಜಗಳಗಳಲ್ಲಿ ವ್ಯರ್ಥ ಮಾಡುವುದಿಲ್ಲ.

೮. ತಣ್ಣನೆಯ ನೀರು ಬಾಯಾರಿದ ಮನುಷ್ಯನಿಗೆ ಪ್ರಯೋಜನಕಾರಿ ಆದರೆ ಜ್ವರ ಹೊಂದಿರುವಾತನಿಗೆ ಅಪಾಯಕಾರಿ. ಅಂತೆಯೇ ಒಬ್ಬರಿಗೆ ಒಳ್ಳೆಯದಾಗಿದ್ದು ಮತ್ತೊಬ್ಬರಿಗೆ ಕೆಡುಕಾಗಬಹುದು. ಆದ್ದರಿಂದ ಪ್ರತಿಯೊಬ್ಬರೂ ಅವರಿಗೆ ಸರಿಹೊಂದುವ ಮಾರ್ಗವನ್ನೇ ಅನುಸರಿಸಬೇಕು.

೯. ಅದ್ವೈತವನ್ನು ಕಲಿಸುವುದು ಅಸಾಧ್ಯ, ಏಕೆಂದರೆ ಅದ್ವೈತವು ಮನಸ್ಸಿನ ಗ್ರಹಿಕೆಯನ್ನು ಮತ್ತು ಇಂದ್ರಿಯಗಳನ್ನು ಮೀರಿದೆ. ಅದ್ವೈತವನ್ನು ಕಲಿಯಲು ಸಾಧ್ಯವಿಲ್ಲ ಆದರೆ ಅನುಭವಿಸಬಹುದು.

೧೦. ಇನ್ನೊಬ್ಬರ ಬಗ್ಗೆ ತೀರ್ಪು ಕೊಡಲು ನಾವು ಯಾರು? ಇತರರ ಬಗ್ಗೆ ನಿರ್ಣಯಿಸಲು ಹೋಗಿ ನಮ್ಮ ಜೀವನದ ಅಮೂಲ್ಯ ಕ್ಷಣಗಳನ್ನು ಕಳೆದುಕೊಳ್ಳುವುದರ ಬದಲು ನಮ್ಮನ್ನು ನಿಯಂತ್ರಿಸಿ ಶುದ್ಧಿಗೊಳಿಸಿಕೊಳ್ಳುವುದು ಉತ್ತಮ.

೧೧. ಗಾಯತ್ರೀ ಜಪ ಇಲ್ಲದೆ ಮಾಡುವ ಪೂಜೆಗಳು ವಸ್ತ್ರ ಧರಿಸದೇ ಅಲಂಕಾರ ಮಾಡಿಕೊಂಡಂತೆ.

೧೨. ಕರ್ಮಾಚರಣೆಯಿಂದ ಮನವು ಶುದ್ಧಿಗೊಳ್ಳುವುದು. ಮನಶ್ಶುದ್ಧಿಯಿಂದ ಎಲ್ಲಾ ಇಂದ್ರಿಯ ಭೋಗವಸ್ತುಗಳಲ್ಲಿಯೂ ಅನಾಸಕ್ತಿ ಮೂಡಿ ಸಂನ್ಯಾಸಕ್ಕೆ ಅರ್ಹತೆ ಬರುವುದು. ಸಂನ್ಯಾಸದಿಂದ ಸತತವಾಗಿ ಆತ್ಮಸ್ವರೂಪದ ವಿಚಾರ ಮಾಡುವುದು. ಅನಂತರ ಆತ್ಮಸಾಕ್ಷಾತ್ಕಾರದ ಮಜಲುಗಳಾದ ಶ್ರವಣ, ಮನನ, ನಿದಿಧ್ಯಾಸನಗಳ ಮೂಲಕ ಆತ್ಮವನ್ನು ಅಂಗೈಯಲ್ಲಿಯ ನೆಲ್ಲಿಕಾಯಿಯಂತೆ ಅರಿತುಕೊಳ್ಳಲು ಅಡ್ಡವಾದ ಅಜ್ಞಾನದ ತೆರೆಯನ್ನು ಸರಿಸಿಹಾಕುವುದು. ಅನಂತರ ಆತ್ಮಾನಂದದಲ್ಲಿ ಮಗ್ನನಾಗುವುದು.

೧೩. ದುಃಖಕ್ಕೆ ಕಾರಣ ಈ ಶರೀರ. ಈ ಶರೀರಕ್ಕೆ ಕಾರಣ ಕರ್ಮಗಳು. ಆ ಕರ್ಮಗಳು ಹುಟ್ಟುವುದು ರಾಗದ್ವೇಷಗಳಿಂದ. ರಾಗದ್ವೇಷಗಳು ಹುಟ್ಟುವುದು ವಸ್ತುಗಳು ಬೇಕುಬೇಡವೆಂಬ ತಪ್ಪು ಗ್ರಹಿಕೆಯಿಂದ. ಅಂಥ ತಪ್ಪುಗ್ರಹಿಕೆಯುಂಟಾಗುವುದು ದ್ವೈತ ಭಾವದಿಂದ. ಆ ದ್ವೈತಭಾವ ಹುಟ್ಟುವುದು ಆತ್ಮನ ಅರಿವಿಲ್ಲದಿರುವ ಅಜ್ಞಾನದಿಂದ. ಆ ಅಜ್ಞಾನವು ನಾಶವಾಗುವುದು ಆತ್ಮ ಜ್ಞಾನೋದಯದಿಂದ. ಆಗ ಎಲ್ಲ ತಪ್ಪುಗ್ರಹಿಕೆಯೂ ತಾನಾಗಿಯೇ ಪಲಾಯನವಾಗುವುದು. ಆಗ ನೋವೂ ದುಃಖವೂ ಇರುವುದಿಲ್ಲ. ಆದ್ದರಿಂದ ಆತ್ಮಸಾಕ್ಷಾತ್ಕಾರವೊಂದೇ ನಮ್ಮನ್ನು ನೋವಿನಿಂದಲೂ, ದುಃಖದಿಂದಲೂ ಮುಕ್ತಗೊಳಿಸಬಲ್ಲದು.

೧೪. ಮನಸ್ಸು ಇಂದ್ರಿಯ ಸುಖಗಳ ಅಪೇಕ್ಷೆಯಿಂದ ವಿಚಲಿತವಾದರೆ ಅದನ್ನು ಏಕಾಗ್ರಗೊಳಿಸುವುದು ಸಾಧ್ಯವಿಲ್ಲ. ಆದ್ದರಿಂದ ಮನಸ್ಸನ್ನು ಆಸೆಯಿಂದಲೂ ಮುಕ್ತಗೊಳಿಸಬೇಕು. ಸ್ವಾನುಭವದಿಂದ ಈ ಶರೀರಾದಿಯು ಆತ್ಮನಲ್ಲವೆಂದು ನಾವು ಅರ್ಥಮಾಡಿಕೊಳ್ಳುವವರೆಗೂ "ನಾನು" ಎಂಬುದಕ್ಕೆ ವಿಶೇಷಣವಾಗಿ ಕರ್ತೃತ್ವ ಭಾವವು ಜಾಗೃತವಾಗಿರುತ್ತದೆ.

೧೫. ನಿಷ್ಕಾಮ ಕರ್ಮಾನುಷ್ಠಾನದಿಂದ ಮನಸ್ಸು ಕಲ್ಮಶರಹಿತವಾಗಿ,

ನಿಷ್ಕಾಮ ಭಕ್ತಿಯಿಂದ ನಿಶ್ಚಲತೆಯನ್ನು ಗಳಿಸಿಕೊಂಡು ಆತ್ಮಜ್ಞಾನವನ್ನು ಪಡೆಯಲು ಅರ್ಹತೆಯನ್ನು ಸಂಪಾದಿಸುತ್ತದೆ. ಆಗ ಆತ್ಮವು ಮನಸ್ಸಿನಲ್ಲಿ ದೇದೀಪ್ಯಮಾನವಾಗಿ ಪ್ರತಿಫಲಿಸುತ್ತದೆ.

೧೬. ಆತ್ಮನ ನಿಜಸ್ವರೂಪವನ್ನರಿಯದೆ ಅದು ಬೇರೆ ಏನೋ ಎಂದು ಭಾವಿಸುವವನು ತನ್ನನ್ನು ತಾನೇ ಅಪಹರಿಸಿಕೊಳ್ಳುವನು.

೧೭. ಧರ್ಮವನ್ನು ಅಧ್ಯಯನ ಮಾಡಿದರಷ್ಟೇ ಸಾಲದು. ಅದನ್ನು ತಮ್ಮ ದೈನಂದಿನ ಜೀವನದಲ್ಲಿ ಕಾರ್ಯರೂಪಕ್ಕೆ ತರಬೇಕು. ಲೌಕಿಕ ಉದ್ದೇಶಗಳಿಗೆ ನೀವು ಸಮುದ್ರ ಮತ್ತು ಆಕಾಶಗಳನ್ನು ದಾಟಲು ಸಿದ್ಧ. ಆದರೆ ಸತ್ಯವನ್ನು ಕುರಿತ ನಿಮ್ಮ ಸಂದೇಹಗಳನ್ನು ಪರಿಹರಿಸಲು ಗುರುಗಳೇ ನಿಮ್ಮ ಮನೆಯ ಬಾಗಿಲಿಗೆ ಬರಬೇಕೆನ್ನುವಿರಿ.

೧೮. ಯಾವಾಗ ನೀವು "ಧರ್ಮವು ಬದುಕಿನ ಕೇವಲ ಒಂದೇ ಒಂದು ಅಂಶವಲ್ಲ. ಅದು ಇಡೀ ಬದುಕೇ ಆಗಿದೆ" ಎಂದು ತಿಳಿಯುವಿರೋ ಆಗ ಮಾತ್ರ ನೀವು ಸರಿಯಾದ ಗುರುವನ್ನು ಪ್ರಾಮಾಣಿಕವಾಗಿ ಅರಸಲು ಉದ್ಯುಕ್ತರಾಗುವಿರಿ.

೧೯. ಅನುಕೂಲತೆ ಸುಖದ ಮಾನದಂಡವಾಗಲು ಸಾಧ್ಯವಿಲ್ಲ. ಸುಖವೆಂಬುದು ಮನಸ್ಸಿನ ಸ್ಥಿತಿ. ಅದನ್ನು ಬಾಹ್ಯ ಸಂಪತ್ತುಗಳ ಗುಣಪರಿಮಾಣಗಳ ಮೂಲಕ ಅಳೆಯಲು ಸಾಧ್ಯವಿಲ್ಲ.

೨೦. ನಾವು ಎಚ್ಚರವಾಗಿದ್ದಾಗ ಸಣ್ಣ ಹುಳುವೊಂದು ನಮ್ಮ ಹತ್ತಿರ ಬಂದರೆ ನಾವು ಭಯಪಡುತ್ತೇವೆ. ಆದರೆ ನಿದ್ರೆ ಮಾಡುತ್ತಿದ್ದಾಗ ದೊಡ್ಡ ಹುಲಿಯೊಂದು ನಮ್ಮ ಮೇಲೆ ಬರುತ್ತಿದ್ದರೂ ನಮಗೆ ಭಯವಿರುವುದಿಲ್ಲ. ಎಚ್ಚರ ಸ್ಥಿತಿಯಲ್ಲಿ ಈ ಶರೀರವೇ ನಾನೆಂದು ನಂಬಿಕೊಂಡಿರುವುದರಿಂದ ನಮಗೆ ಹೆದರಿಕೆಯೂ, ದುಃಖವು ಉಂಟಾಗುತ್ತದೆ. ಗಾಢ ನಿದ್ರೆಯಲ್ಲಿ ಆ ನಂಬಿಕೆ ಇಲ್ಲದಿರುವುದರಿಂದ ಭಯವೂ ಇರದು, ದುಃಖವೂ ಇರದು.

೨೧. ಇಂದ್ರಿಯ ಭೋಗದಿಂದ ದೊರೆಕುವ ಸುಖ ಮತ್ತು ಶಾಂತಿ, ಬುಸುಗುಡುತ್ತಿರುವ ಕುಪಿತ ಸರ್ಪದ ಹೆಡೆಯ ನೆರಳಿನಂತೆ.

೨೨. ಆತ್ಮವನ್ನು ಅನಾತ್ಮವೆಂದು ಭಾವಿಸುವುದು ಅಷ್ಟೊಂದು ಅಪಾಯಕಾರಿಯಾಗದಿರಬಹುದು. ಆದರೆ ಅನಾತ್ಮವಾದ ಶರೀರವನ್ನೇ ಆತ್ಮವೆಂದು ಭಾವಿಸುವುದು ತೀರ ಅಪಾಯಕಾರಿ. ಹಗ್ಗವನ್ನು ಹಾವೆಂದು ತಿಳಿದುಕೊಂಡರೆ ಭಯವುಂಟಾಗುತ್ತದೆ, ಕೈಕಾಲು ನಡುಗಲು ಆರಂಭವಾಗುತ್ತದೆ. ಅದಕ್ಕಿಂತ ಕೆಟ್ಟದ್ದೇನೂ ಸಂಭವಿಸುವುದಿಲ್ಲ. ಆದರೆ ಹಾವನ್ನೇ ಹಗ್ಗವೆಂದು ಭಾವಿಸಿ ಅದನ್ನೆತ್ತಿಕೊಂಡರೆ ಅದು ಅವನನ್ನು ಕಚ್ಚುವುದು ನಿಶ್ಚಯ ಮತ್ತು ಅದರಿಂದ ಸಾಯಲೂಬಹುದು.

೨೩. ಅತ್ಯಲ್ಪವಾದ ಕೇವಲ ಎರಡು ರೂಪಾಯಿ ಹಣವನ್ನು ಕಳೆದುಕೊಂಡರೂ ಆ ನಷ್ಟದಿಂದಾದ ದುಃಖವು ಕಳೆಯಲು ಮೂರು ದಿನಗಳಾದರೂ ಬೇಕಾಗುತ್ತದೆ. ಆದರೆ ಈ ಅಮೂಲ್ಯವಾದ ಜೀವನವನ್ನು ಜ್ಞಾನಾರ್ಜನೆ ಮಾಡದೆ ನಷ್ಟಮಾಡಿಕೊಳ್ಳಲು ನಾವು ಸಿದ್ಧರಾಗಿದ್ದೇವೆ.

೨೪. ನಿಮ್ಮ ಬುದ್ಧಿವಂತಿಕೆ, ಪಾಂಡಿತ್ಯವನ್ನು ಪ್ರದರ್ಶಿಸಬೇಕೆಂಬ ಇಚ್ಛೆ ಇದ್ದಲ್ಲಿ ನೀವು ಅನೇಕ ಗ್ರಂಥಗಳ ಅಭ್ಯಾಸವನ್ನು ಮಾಡಬಹುದು. ಆದರೆ ತತ್ವವನ್ನು ಅರಿತಿದ್ದು ಅದನ್ನು ಸಾಧಿಸಿಕೊಳ್ಳುವ ಇಚ್ಛೆ ಇದ್ದರೆ ಅದೆಲ್ಲ ಅನವಶ್ಯಕ. ಒಬ್ಬ ಅಡಿಗೆಯವನು ರುಚಿಯಾದ ಅಡುಗೆಯನ್ನು ಮಾಡಬೇಕೆಂದಿದ್ದಲ್ಲಿ ಅದಕ್ಕೆ ಏನೆಲ್ಲಾ ಬೇಕಾಗುವುದು, ಯಾವ ಪ್ರಮಾಣದಲ್ಲಿ ಹಾಕಬೇಕು ಎಂಬುದನ್ನು ತಿಳಿದಿರುತ್ತಾನೆ. ಅದನ್ನು ಆಸ್ವಾದಿಸುವವನಿಗೆ ಅದನ್ನೆಲ್ಲ ತಿಳಿದುಕೊಳ್ಳುವ ಅವಶ್ಯಕತೆ ಇರುವುದಿಲ್ಲ.

೨೫. ಸಂತೋಷ ಮತ್ತು ಶಾಂತಸ್ಥಿತಿ ಎರಡು ಒಂದೇ ಆಗಿರುತ್ತದೆ. ಮನಃಶಾಂತಿ ಇರುವವರು ಮಾತ್ರ ಸಂತೋಷವನ್ನು ಅನುಭವಿಸಬಹುದು. ಆಲೋಚನೆಗಳನ್ನು ಸಂಪೂರ್ಣವಾಗಿ ತೊಡೆದುಹಾಕುವುದೇ ಅಧ್ಯಾತ್ಮ ಆಚರಣೆಯ ಗುರಿ.

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻

# ಕೆಲವು ಭಜನೆಗಳು

## ॥ಶ್ರೀ ಯತಿರಾಜಾಷ್ಟಕ॥

ಚಂದ್ರಶೇಖರ ಚಂದ್ರಶೇಖರ ಚಂದ್ರಶೇಖರ ಪಾಹಿಮಾಂ
ಚಂದ್ರಶೇಖರ ಚಂದ್ರಶೇಖರ ಚಂದ್ರಶೇಖರ ರಕ್ಷಮಾಂ

ಯಸ್ಯ ದರ್ಶನ ಮಾತ್ರತಃ ಕೃತಕೃತ್ಯತಾಂ ಲಭತೇ ಪುಮಾನ್
ತಮ್ ಕೃಶಾನು ಸಮಂ ಮಮಾಂತರ ಸೋಮಮದ್ವಯ ಭಾಸ್ಕರಂ
ಋಷ್ಯಶೃಂಗ ಪುರೇಶ್ವರಂ ಗುರು ಶಂಕರಾಂಶ ಸಮುದ್ಭವಂ
ಚಂದ್ರಶೇಖರ ಭಾರತೀ ಯತಿರಾಜಮಾತ್ಮನಿ ಭಾವಯೇ

ಭಸ್ಮ ಭೂಷಿತ ವಿಗ್ರಹಮ್ ಸಫಲೀಕೃತಾಕ್ಷ ಸಮುಧ್ಭವಂ
ಬಾಲಕಾಶ್ಯಪ ಗೋತ್ರಜಂ ಶುಕಮಾದದಾನಮನಿಂದಿತಂ
ಕಾಲ ಕಾಲ ಪದಾನತಂ ಭವ ಪಾಶಮೋಚಕಮೀಶ್ವರಂ
ಚಂದ್ರಶೇಖರ ಭಾರತೀ ಯತಿರಾಜಮಾತ್ಮನಿ ಭಾವಯೇ

ಶಾರದಾ ಪದ ಪಂಕಜಾಂತರಲೀನಮಾನಸ ಷಟ್ಪದಂ
ತತ್ಕೃಪಾಮೃತಪಾನ ಮೇಧಿತ ಸರ್ವಶಾಸ್ತ್ರ ಗತಿಂ ವರಂ
ಕುಂಕುಮಾರ್ಚನ ತೋಷಿತಾಬ್ಜ ಭವೇಶ್ವರೀ ಪದಯುಗ್ಮಕಮ್
ಚಂದ್ರಶೇಖರ ಭಾರತೀ ಯತಿರಾಜಮಾತ್ಮನಿ ಭಾವಯೇ

ಶಕ್ತಿ ಸಂಯುತ ವಿಘ್ನನಾಶನ ಭಕ್ತಿಯುಕ್ತ ಸುಮೇಧಸಂ
ಬೋಧಿತಾಖಿಲ ವೇದಶಾಸ್ತ್ರ ಪುರಾಣಸಾರಮನಾರತಂ
ಶಾಂತಮೂರ್ತಿಮಲೌಕಿಕ ಪ್ರತಿಭಾವಿಶೇಷ ವಿರಾಜಿತಂ
ಚಂದ್ರಶೇಖರ ಭಾರತೀ ಯತಿರಾಜಮಾತ್ಮನಿ ಭಾವಯೇ

ಛಾತ್ರವೃಂದ ಕೃಪಾನಿಧಿಮ್ ಗುರುಮಪ್ರಮೇಯ ತಪೋನಿಧಿಮ್
ವಿಸ್ಮಯ ಸ್ಮೃತಿಶಾಲಿನಂ ನರರೂಪಧಾರಿಣಮೀಶ್ವರಂ
ಶ್ರೀ ನೃಸಿಂಹವನೇ ನಿವಾಸಿನಮಾತ್ಮಯೋಗರತಮ್ ವಿಭುಮ್

ಚಂದ್ರಶೇಖರ ಭಾರತೀ ಯತಿರಾಜಮಾತ್ಮನಿ ಭಾವಯೇ

ಸ್ತೋತುಮೇತಿ ದರಿದ್ರತಾಮಖಿಲಶ್ಚ ವಾಙ್ಮಯ ಸಾಗರೋ
ಯಂ ಮಹಾಮಹಿಮಾನ ಮೀಡಿತುಮಲ್ಪಧೀರಪಿತಂಯತೇ
ಚಾಪಲೇನ ಕಥಂ ಕಥಂ ತ್ವಪಿ ಶಾರದಾಂ ಮನಸಿ ಸ್ಮರನ್
ಚಂದ್ರಶೇಖರ ಭಾರತೀ ಯತಿರಾಜಮಾತ್ಮನಿ ಭಾವಯೇ

ಶ್ರೀಮಠೇ ಗುರುಪೀಠಮೇತ್ಯ ರರಾಜಯಸ್ತಮನೀದೃಶಂ
ಯಸ್ಯ ಮೂರ್ಧನಿ ಮಂಡಿತಂ ಮುಕುಟಂ ಭಜೇದಪಿ ಧನ್ಯತಾಮ್
ಸೌಮ್ಯ ರೂಪಿಣಮುಗ್ರತೇಜಸ ಮಾನತೇಷು ದಯಾಘನಮ್
ಚಂದ್ರಶೇಖರ ಭಾರತೀ ಯತಿರಾಜಮಾತ್ಮನಿ ಭಾವಯೇ

**ಚಿದಂಬರ ಶರ್ಮ**

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

# ॥ಶ್ರೀ ಚಂದ್ರಶೇಖರ ಪಾಹಿ ಗುರೋ॥

ಚಂದ್ರಶೇಖರ ಪಾಹಿ ಗುರೋ
ಸಾಂದ್ರಗುಣಾಲಯ ತ್ರಾಹಿ ಗುರೋ

ಶೃಂಗಶೈಲಪುರವಾಸ ಗುರೋ, ತುಂಗಾತೀರ ವಿಹಾರಿ ಗುರೋ
ಶಂಕರಮತ ಪರಿಪಾಲ ಗುರೋ, ಕಿಂಕರ ಪಾಲಿತ ಮಹಿಮ ಗುರೋ

ದಂಡಕಮಂಡಲಧಾರಿ ಗುರೋ, ಅಂಡಪಿಂಡ ಬ್ರಹ್ಮಾಂಡ ಗುರೋ
ಕಾಷಾಯಾಂಬರಭೂಷ ಗುರೋ, ವೇಷಾಡಂಬರ ರಹಿತ ಗುರೋ

ದಕ್ಷಿಣಪೀಠಾಧೀಶ ಗುರೋ, ಸಾಕ್ಷಾತ್ ಪರಶಿವಮೂರ್ತಿ ಗುರೋ
ನಾರಸಿಂಹಕರಜಾತ ಗುರೋ, ಭಾರತೀಶ ಶುಭನಾಮ ಗುರೋ

ಗೀರ್ವಾಣೀ ವರ ಭಕ್ತ ಗುರೋ, ಪಾರಮಾರ್ಥ ವರ ತತ್ವ ಗುರೋ
ಪೂಜಿತವರ ಶ್ರೀಚಕ್ರ ಗುರೋ, ರಾಜಮಾನ್ಯ ಯತಿರಾಜ ಗುರೋ

ವಿದ್ಯಾದಾಯಕ ಪೂಜ್ಯ ಗುರೋ, ಶುದ್ಧಾದ್ವೈತ ಪ್ರಚೋದ್ಯ ಗುರೋ
ಸತ್ಯ ಧರ್ಮ ಪರಿಪಾಲ ಗುರೋ, ನಿತ್ಯ ಕರ್ಮ ಸಂತುಷ್ಟ ಗುರೋ

ಭಕ್ತಾಭೀಷ್ಟದ ಪರಮ ಗುರೋ, ರಕ್ತನಳಿನದಳನೇತ್ರ ಗುರೋ
ಜ್ಞಾನಮಾರ್ಗ ಸಿದ್ಧಾಂತ ಗುರೋ, ಧ್ಯಾನಿತಜನ ಪರಿಪೋಷ ಗುರೋ

ಜನ್ಮದುಃಖ ಭವನಾಶ ಗುರೋ, ಚಿನ್ಮಯರೂಪಪ್ರಶಾಂತ ಗುರೋ
ಕಾರುಣ್ಯಾಂಬುಧಿ ಚಂದ್ರ ಗುರೋ, ಘೋರ ದುರಿತ ಹರಣೈಕ ಗುರೋ

ಹರಿಹರ ಬ್ರಹ್ಮ ಸ್ವರೂಪ ಗುರೋ, ಪರಮಹಂಸ ಪರಮಾತ್ಮ ಗುರೋ
ಪ್ರಕಟಿತಲೀಲಾ ಮಹಿಮ ಗುರೋ, ಸುಖಕರ ಮುಕ್ತಿಪ್ರದಾತ ಗುರೋ

ಅಖಂಡ ವೈಭವ ಯುಕ್ತ ಗುರೋ, ಸಕಲಜಗತ್ಕಲ್ಯಾಣ ಗುರೋ
ನಿಗಮಾಗಮ ಸಂಪೂಜ್ಯ ಗುರೋ, ಜಗದ್ವಂದ್ಯ ಜಗದೀಶ ಗುರೋ

ಶ್ರೀಧರದಾಸ ಹೃದಾಬ್ಜ ಗುರೋ ಸಿದ್ಧಾಂತ ವಿಕಾಸ ಗುರೋ
ಜಯ ಜಯ ಮಂಗಳ ಶುಭದ ಗುರೋ, ಜಯ ಶುಭ ಮಂಗಳ ಶುಭದ ಗುರೋ

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

# ॥ ಶ್ರೀ ಚಂದ್ರಶೇಖರಾರ್ಯರಾಜಾಷ್ಟಕಂ॥

ಶಿಷ್ಯವೃಂದಸೇವಿತಂ ಸಮಸ್ತದೋಷ ವರ್ಜಿತಂ
ಭಸ್ಮಪುಂಡ್ರರಾಜಿತಂ ಪವಿತ್ರದಂಡಶೋಭಿತಂ
ನಮ್ರಲೋಕ ಪೂಜಿತಂ ಸುರಾಧಿರಾಜಭಾವಿತಮ್
ಚಂದ್ರಶೇಖರಾರ್ಯರಾಜ ಮಾಶ್ರಯಾಮಿ ಮುಕ್ತಯೇ

ಚಂದ್ರಚೂಡಪೂಜನ ಪ್ರಸಕ್ತಚಿತ್ತಮಾನಸಂ
ಸತ್ಪ್ರಬೋಧನಾಸ್ತಹೃದ್ಯ ಶಿಷ್ಯವರ್ಗಸಾಧ್ವಸಂ
ಪೂರ್ಣಚಂದ್ರಬಿಂಬಕಾಂತಿ ಕಾಂತವಕ್ತ್ರಸಾರಸಂ
ಚಂದ್ರಶೇಖರಾರ್ಯರಾಜ ಮಾಶ್ರಯಾಮಿ ಮುಕ್ತಯೇ

ಪಾದಪದ್ಮನಮ್ರಕಾಮಿತಾರ್ಥಕಲ್ಪಪಾದಪಂ
ಸತ್ಪ್ರಸಕ್ತಿಶುದ್ಧಚಿತ್ತಭೂಮಿತಾಪಸಾಧಿಪಂ
ವಿಸ್ಮೃತಾತ್ಮಹೃತ್ತಮಿಸ್ರವಾರಣೇ ದಿನಾಧಿಪಂ
ಚಂದ್ರಶೇಖರಾರ್ಯರಾಜ ಮಾಶ್ರಯಾಮಿ ಮುಕ್ತಯೇ

ಪ್ರಾಕ್ತನಾತಿಭಾಗ್ಯರಾಶಿಲಬ್ಧಶೈವತೇಜಸಂ
ಶಂಕರಾರ್ಯಸಾಂಪ್ರದಾಯಬೋಧನೈಕಮಾನಸಂ
ವೇದಶಾಸ್ತ್ರಭಾಷ್ಯತತ್ವವೇದಿನಂಮಹೌಜಸಂ
ಚಂದ್ರಶೇಖರಾರ್ಯರಾಜ ಮಾಶ್ರಯಾಮಿ ಮುಕ್ತಯೇ

ಶೃಂಗಶೈಲಧರ್ಮಪೀಠಶೋಭಮಾನಮೂರ್ತಿಕಂ
ಶಂಕರಾರ್ಯಶಾರದಾಪದಾರ್ಚಕಂಸುಬೋಧಕಂ
ಚಕ್ರರಾಜಪೂಜಕಂಕಿರೀಟಚಾರುಮಸ್ತಕಂ
ಚಂದ್ರಶೇಖರಾರ್ಯರಾಜ ಮಾಶ್ರಯಾಮಿ ಮುಕ್ತಯೇ

ರಾಜಲಕ್ಷ್ಮಲಕ್ಷಿತಂ ಸಮಗ್ರರಾಜಪೂಜಿತಂ
ಸರ್ವಶಾಸ್ತ್ರಪಂಡಿತಂ ಸ್ವಧರ್ಮರಕ್ಷಣೇರತಂ
ಅಕ್ಷಮಾಲ್ಯಮಂದಿತಂ ಪಯೋಧಿಜಾಕಟಾಕ್ಷಿತಂ
ಚಂದ್ರಶೇಖರಾರ್ಯರಾಜ ಮಾಶ್ರಯಾಮಿ ಮುಕ್ತಯೇ
ಗದ್ಯಪದ್ಯವಾಕ್ಪ್ರವಾಹದೇವತಾರ್ಯಸನ್ನಿಭಂ
ಜ್ಞಾನವಾರ್ಧಿಕೌಸ್ತುಭಂ ಸುಕರ್ಮನಿಷ್ಠವಲ್ಲಭಂ
ದುಷ್ಟಲೋಕದುರ್ಲಭಂ ಭವಾಬ್ಧಿತಾರಕಂಶುಭಂ
ಚಂದ್ರಶೇಖರಾರ್ಯರಾಜ ಮಾಶ್ರಯಾಮಿ ಮುಕ್ತಯೇ

ಖಂಡಿತಾನ್ಯದರ್ಶನಂ ಸಮರ್ಥಿತಾತ್ಮದರ್ಶನಂ
ಪಾಪತಾಪಮರ್ದನಂ ಸುಪಕ್ವಸರ್ವಸಾಧನಂ
ಭೂತಜಾತವಾರಣಂ ನಿವಾಸಭೂಮಿಪಾವನಂ
ಚಂದ್ರಶೇಖರಾರ್ಯರಾಜ ಮಾಶ್ರಯಾಮಿ ಮುಕ್ತಯೇ

**ನೆಲಮಾವು ಮಠಾಧಿಪ ಶ್ರೀಕಮಲಾನಂದ ನರಸಿಂಹ ಭಾರತೀ ಸ್ವಾಮಿ ವಿರಚಿತ**

*****************************

**ಶ್ರೀ ಜಗದ್ಗುರು ಪಂಚರತ್ನಮಾಲಾ ಶೃಂಗಗಿರಿ ಶ್ರೀ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿನಾಂ ಷಷ್ಠಿ ಪೂರ್ತಿ ಶಾಂತಿ ಜ್ಞಾಪಕಾರ್ಥಂ ಶ್ರೀ ಗೋಪಾಲಾನಂದನಾಥಯೋಗಿಭಿರ್ಮುದ್ರಾವಿತಾಂ ೧೯೫೨**

ಶೃಂಗಪರ್ವತ ನಾಮ ಭೂಷಿತ ರಮ್ಯಪತ್ತನಸುಸ್ಥಿತೇ
ಶಾಂಕರೇಖಿಲ ಶಂಕರೇ ಪರಮಾಸನೆ ಸುವಿರಾಜಿತಂ
ಚಂದ್ರಮೌಳಿ ಧರಾತ್ಮಜಾತ್ಮಜ ಶಾರದಾರ್ಚನ ತತ್ಪರ
ಚಂದ್ರಶೇಖರ ಸದ್ಗುರೋ ತವ ಪಾದಪಂಕಜಮಾಶ್ರಯೇ

ರಕ್ತವಸ್ತ್ರವರಾಕ್ಷ ಸೂತ್ರ ವಿರಾಜಿತಾಖಿಲವಂದಿತ
ಭಸ್ಮದಂಡ ಕಮಂಡಲೋಜ್ವಲ ದೇಹ ದೇಶಿಕ ರಾಣ್ಮುದಾ
ತತ್ವಬೋಧಕ ಮುಕ್ತಿದಾಯಕ ಲೋಕಪಾಲಕ ಪಾಲಕ
ಚಂದ್ರಶೇಖರ ಸದ್ಗುರೋ ತವ ಪಾದಪಂಕಜಮಾಶ್ರಯೇ

ದುಷ್ಟಶಿಕ್ಷಕ ಶಿಷ್ಟಪಾಲಕ ರಾಜರಾಜಸುಪೂಜಿತ
ವೇದದರ್ಶಿಕ ಮಾರ್ಗದರ್ಶಕ ಶೃಂಗಶೈಲವಿರಾಜಿತ
ಬುದ್ಧಿವರ್ಧಕ ಸಿದ್ಧಿದಾಯಕ ಮಂದಹಾಸಮುಖಾಂಬುಜ
ಚಂದ್ರಶೇಖರ ಸದ್ಗುರೋ ತವ ಪಾದಪಂಕಜಮಾಶ್ರಯೇ

ಘೋರಸಂಸೃತಿ ಸಾಗರೋರ್ಮಿವಿಲುಂಠನಾರ್ತಿಮತಾಂ ನೃಣಾಮ್
ತ್ವಾಮ್ ವಿನಾ ಭುವಿ ಪಾಪಿನಾಮ್ ವದ ರಕ್ಷಕೋಸ್ತಿಕ ಈದೃಶಃ
ತತ್ವದಂಘ್ರಿಮುಪಾಶ್ರಿತಂ ಗುರುವರ್ಯ ಮಾಮವ ಸಾದರಂ
ಚಂದ್ರಶೇಖರ ಸದ್ಗುರೋ ತವ ಪಾದಪಂಕಜಮಾಶ್ರಯೇ

ಪ್ರಸೀದ ವರಸದ್ಗುರೋ ಮಮ ಹೃದಿ ಪ್ರಭೂತಂ ಭಯಂ
ವಿದಾರಯ ದರಿದ್ರತಾಂ ಕಲಯ ದೇವ ಸರ್ವಜ್ಞತಾಂ
ಪ್ರದೇಹಿ ಕರುಣಾನಿಧೇ ಚರಣಯುಗ್ಮ ಪದ್ಮಾಶ್ರಯಂ
ನಿವಾರಯ ಜರಾಮೃತೀ ಸದುಪದೇಶ ದಿವ್ಯಾಮೃತೈಃ

**ಬಿ ಕೆ ನರಸಿಂಹ ಶಾಸ್ತ್ರಿ**
**ವಾಗೀಶ್ವರೀ ದೇವಾಲಯ,**
**ಶ್ರೀಮಠ ಜಹಗೀರ್, ಶೃಂಗಗಿರಿ**

❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊❊

## ॥ ಶ್ರೀ ಚಂದ್ರಶೇಖರ ಭಾರತೀ ನವರತ್ನಮಾಲಾ ಸ್ತೋತ್ರಂ ॥

## ಶೃಂಗೇರಿ ಜಗದ್ಗುರು ಶ್ರೀ ಶ್ರೀ ಶ್ರೀ ಭಾರತೀ ತೀರ್ಥ ಮಹಾಸ್ವಾಮಿಗಳವರ ರಚನೆ

ಶ್ರೀಮದ್ ಚಂದ್ರಶೇಖರ ಭಾರತ್ಯಭಿದಾನಮಾಶ್ರಯೇ ಯಮಿನಂ
ನೀರವಧಿ ಸಂಸೃತಿನೀರಧಿಮಗ್ನ ಜನೋದ್ಧರಣ ಬದ್ಧದೀಕ್ಷಂತಂ

ಕಾಷಾಯಾಂಬರ ಪರಿವೃತಮೀಷತ್ಸ್ಮಿತವದನಂ ಇಷ್ಟದಾತಾರಂ
ಶೇಶಖ್ಯೇಯಗುಣಾಳಿ ಭೂಶಾಯಿತ ಶಮದಮಾದಿಕಂ ವಂದೇ

ಗಾಂಗ ಝುರೀಸಮವಾಚಂ ಸ್ವಾಂಗತ್ವಿಣ್ಣಿರ್ಜಿತಾಚ್ಛ ಗಾಂಗೇಯಂ
ಮಾಂಗಲಿಕಮಾಶ್ರಯೇಹಂ ಜಾಂಗಲಿಕಂಭವ ಮಹಾವಿಶಸ್ಯೇಶಂ

ಕರುಣಾಮೃತ ಸರಿದೇಶಂ ಗುರುಣಾಪಿ ಸ್ತುತ್ಯಮತುಲಧೀಯುಕ್ತಂ
ತರುಣಾರುಣ ವದನಾಭ್ಯಮ್ ಚ ನೃಣಾಮ್ ಗಮ್ಯಂ ತಮಾಶ್ರಯೇ ಸತತಂ

ಅತಿವೇಲ ಮಧುರಭಾಷಿತಮತಿತರಲ ಸ್ವಾಂತಮಖಿಲವಂದ್ಯಪದಂ
ಯತಿವರ್ಯಂ ಹೃದಿ ಕಲಯೇ ಮತಿಮಾನ್ಯಸ್ಯಾ ಪನುತ್ತಯೇ ಸತತಂ

ಪಾಲಿತ ನಿಜಭಕ್ತತತಿಂ ಶೀಲಿತ ವೇದಾಂತ ಗೂಢತತ್ವಂತಂ
ಮೀಲಿತಲೋಚನ ಯುಗಲಂ ಲಲಿತ ಭುವನತ್ರಯಂ ನಮಾಮಿ ಸದಾ

ರಾಕಾಶಶಿವಿಭವಕ್ತ್ರಂ ಪಾಕಾರಿಪ್ರಮುಖಕೀರ್ತ್ಯ ಚಾರಿತ್ರಂ
ಆಕಾಶಕೇಶ ಭಕ್ತಂ ಶೋಕಾಪಹಮಾಶ್ರಯೇ ಗುರುತ್ತಂಸಂ

ತಾಪಾರಣ್ಯಕೃಶಾನುಂ ಭೂಪಾಲಕವಂದನೀಯ ಪದಯುಗಲಂ
ಪಾಪಾಪಹನಾಮಾನಂ ಶಾಪಾನುಗ್ರಹ ಸಮರ್ಥಮಹಮೀಡೇ

ಶಂಕರದೇಶಿಕ ವಿರಚಿತ ಪೀಠಾಧಿಪಮಾಲಿಕಾ ಮಹಾರತ್ನಂ
ಪ್ರಣಮಾಮಿ ಚಂದ್ರಶೇಖರ ಭಾರತ್ಯಭಿದಾನ ದೇಶಿಕಂ ಹೃದಯೇ

**ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿನಾಂ**

# ಅಷ್ಟೋತ್ತರ ಶತನಾಮಾವಳಿಃ

೧. ಓಂ ಶ್ರೀ ಶೃಂಗಪುರ ಪೀಠೇಶಾಯ ನಮಃ
೨. ಓಂ ಶ್ರೀ ವಿದ್ಯಾಜಪ ತತ್ಪರಾಯ ನಮಃ
೩. ಓಂ ಸುನಂದನಾಶ್ವಯು ಕೃಷ್ಣಮಘಕ್ಷ್ವೈಕಾದಶೀಭವಾಯ ನಮಃ
೪. ಓಂ ಪ್ಲವಾಬ್ದಸಿತ ಮಾಘೀಯ ಪಂಚಮೀಪ್ರಾಪ್ತ ಮೌಂಜಿಕಾಯ ನಮಃ
೫. ಓಂ ಪರೀಧಾವಿ ಷರಚ್ಚೈತ್ರ ಪ್ರಾಪ್ತ ತುರೀಯಾಶ್ರಮಕ್ರಮಾಯ ನಮಃ
೬. ಓಂ ಚಂದ್ರಶೇಖರ ಶಬ್ದಾದ್ಯಭಾರತ್ಯಾಖ್ಯಾವಿರಾಜಿತಾಯ ನಮಃ
೭. ಓಂ ಶಂಕರಾದಿ ಗುರೂತ್ತಂಸ ಪಾರಂಪರ್ಯ ಕ್ರಮಾಗತಾಯ ನಮಃ
೮. ಓಂ ಚಂದ್ರಮೌಳಿ ಪದಾಂಭೋಜ ಚಂಚರೀಕ ಹೃದಾಂಬುಜಾಯ ನಮಃ
೯. ಓಂ ಶಾರದಾಪದ ಪಾಥೋಜಮರಂದಾಸ್ವಾದ ಲೋಲುಪಾಯ ನಮಃ
೧೦. ಓಂ ಸುರತ್ನ ಗರ್ಭಹೇರಂಬ ಸಮಾರಾಧನ ಲಾಲಸಾಯ ನಮಃ
೧೧. ಓಂ ದೇಶಕಾಂಘ್ರಿ ಸಮಾಕ್ರಾಂತ ಹೃದಯಾಖ್ಯ ಗುಹಾಂತರಾಯ ನಮಃ
೧೨. ಓಂ ಶ್ರುತಿಸ್ಮೃತಿಪುರಾಣಾದಿ ಶಾಸ್ತ್ರ ಪ್ರಾಮಾಣ್ಯಬದ್ಧಧಿಯೇ ನಮಃ
೧೩. ಓಂ ಶ್ರೌತ ಸ್ಮಾರ್ತ ಸದಾಚಾರ ಧರ್ಮಪಾಲನ ತತ್ಪರಾಯ ನಮಃ
೧೪. ಓಂ ತತ್ತ್ವಮಸ್ಯಾದಿ ವಾಕ್ಯಾರ್ಥ ಪರಿಚಿಂತನ ಮನಸಾಯ ನಮಃ
೧೫. ಓಂ ವಿದ್ವದ್ವೃಂದ ಪರಿಶ್ಲಾಘ್ಯ ಪಾಂಡಿತ್ಯ ಪರಿಶೋಭಿತಾಯ ನಮಃ
೧೬. ಓಂ ದಕ್ಷಿಣಾಮೂರ್ತಿ ಸನ್ಮಂತ್ರ ಜಪಧ್ಯಾನ ಪಾರಾಯಣಾಯ ನಮಃ
೧೭. ಓಂ ವಿವಿಧಾರ್ತಿ ಪರಿಕ್ಲಿನ್ನ ಜನ ಸಂದೋಹ ದುಃಖಹೃದೇ ನಮಃ
೧೮. ಓಂ ನಂದಿತಾಶೇಷ ವಿಬುಧಾಯ ನಮಃ
೧೯. ಓಂ ನಿಂದಿತಾಖಿಲದುರ್ಮತಾಯ ನಮಃ
೨೦. ಓಂ ವಿವಿದಾಗಮ ತತ್ತ್ವಜ್ಞಾಯ ನಮಃ
೨೧. ಓಂ ವಿನಯಾಭರಣೋಜ್ವಲಾಯ ನಮಃ
೨೨. ಓಂ ವಿಶುದ್ಧಾದ್ವೈತ ಸಂದೇಷ್ಟ್ರೇ ನಮಃ
೨೩. ಓಂ ವಿಶುದ್ಧಾತ್ಮ ಪಾರಾಯಣಾಯ ನಮಃ
೨೪. ಓಂ ವಿಶ್ವವಂದ್ಯಾಯ ನಮಃ
೨೫. ಓಂ ವಿಶ್ವಗುರವೇ ನಮಃ
೨೬. ಓಂ ವಿಜಿತೇಂದ್ರಿಯ ಸಂಹತಯೇ ನಮಃ
೨೭. ಓಂ ವೀತರಾಗಾಯ ನಮಃ
೨೮. ಓಂ ವೀತ ಭಯಾಯ ನಮಃ

೨೯. ಓಂ ವಿತ್ತಲೋಭ ವಿವರ್ಜಿತಾಯ ನಮಃ
೩೦. ಓಂ ವಂದಿತಾಶೇಷ ಭುವನಾಯ ನಮಃ
೩೧. ಓಂ ವಂದಿತಾಖಿಲ ಸಂಸ್ಕೃತಯೇ ನಮಃ
೩೨. ಓಂ ಸತ್ಯವಾದಿನೇ ನಮಃ
೩೩. ಓಂ ಸತ್ಯರತಾಯ ನಮಃ
೩೪. ಓಂ ಸತ್ಯಧರ್ಮ ಪರಾಯಣಾಯ ನಮಃ
೩೫. ಓಂ ವಿಷಯಾರಯೇ ನಮಃ
೩೬. ಓಂ ವಿಧೇಯಾತ್ಮನೇ ನಮಃ
೩೭. ಓಂ ವಿವಿಕ್ತಾಶಾಸು ಸೇವನಾಯ ನಮಃ
೩೮. ಓಂ ವಿವೇಕಿನೇ ನಮಃ
೩೯. ಓಂ ವಿಮಲಾಯ ನಮಃ
೪೦. ಓಂ ಸ್ವಾಂತಾಯ ನಮಃ
೪೧. ಓಂ ವಿಗತಾ ವಿದ್ಯಾಬಂಧನಾಯ ನಮಃ
೪೨. ಓಂ ನತಲೋಕಹಿತೈಷಿಣೇ ನಮಃ
೪೩. ಓಂ ನಮ್ರ ಹೃತ್ತಾಪಹಾರಕಾಯ ನಮಃ
೪೪. ಓಂ ನಮ್ರಾಜ್ಞಾನ ತಮೋಭಾನವೇ ನಮಃ
೪೫. ಓಂ ನತ ಸಂಶಯಕೃಂತನಾಯ ನಮಃ
೪೬. ಓಂ ನಿತ್ಯ ತೃಪ್ತಾಯ ನಮಃ
೪೭. ಓಂ ನಿರೀಹಾಯ ನಮಃ
೪೮. ಓಂ ನಿರ್ಗುಣಧ್ಯಾನ ತತ್ಪರಾಯ ನಮಃ
೪೯. ಓಂ ಶಾಂತವೇಷಾಯ ನಮಃ
೫೦. ಓಂ ಶಾಂತ ಮನಸೇ ನಮಃ
೫೧. ಓಂ ಶಾಂತಿದಾಂತಿ ಗುಣಾಲಯಾಯ ನಮಃ
೫೨. ಓಂ ಮಿತಭಾಷಿಣೇ ನಮಃ
೫೩. ಓಂ ಮಿತಾಹಾರಾಯ ನಮಃ
೫೪. ಓಂ ಅಮಿತಾನಂದ ತುಂದಿಲಾಯ ನಮಃ
೫೫. ಓಂ ಗುರುಭಕ್ತಾಯ ನಮಃ
೫೬. ಓಂ ಗುರುನ್ಯಸ್ತ ಭಾರಾಯ ನಮಃ
೫೭. ಓಂ ಗುರು ಪದಾನುಗಾಯ ನಮಃ
೫೮. ಓಂ ಹಾಸಪೂರ್ವಾಭಿಭಾಷಿಣೇ ನಮಃ

೫೯. ಓಂ ಹಂಸ ಮಂತ್ರಾರ್ಥ ಚಿಂತಕಾಯ ನಮಃ
೬೦. ಓಂ ನಿಶ್ಚಿಂತಾಯ ನಮಃ
೬೧. ಓಂ ನಿರಹಂಕಾರಯ ನಮಃ
೬೨. ಓಂ ನಿರ್ಮೋಹಾಯ ನಮಃ
೬೩. ಓಂ ಮೋಹನಾಶಕಾಯ ನಮಃ
೬೪. ಓಂ ನಿರ್ಮಮಾಯ ನಮಃ
೬೫. ಓಂ ಮಮತಾಹಂತ್ರೇ ನಮಃ
೬೬. ಓಂ ನಿಷ್ಪಾಪಾಯ ನಮಃ
೬೭. ಓಂ ಪಾಪನಾಶಕಾಯ ನಮಃ
೬೮. ಓಂ ಕೃತಜ್ಞಾಯ ನಮಃ
೬೯. ಓಂ ಕೀರ್ತಿಮತೇ ನಮಃ
೭೦. ಓಂ ಪಾಪಾಘಬಿದುರಾಕೃತಯೇ ನಮಃ
೭೧. ಓಂ ಸತ್ಯ ಸಂಧಾಯ ನಮಃ
೭೨. ಓಂ ಸತ್ಯ ತಪಸೇ ನಮಃ
೭೩. ಓಂ ಸತ್ಯಜ್ಞಾನ ಸುಖಾತ್ಮಧಿಯೇ ನಮಃ
೭೪. ಓಂ ವೇದಶಾಸ್ತ್ರಾರ್ಥ ತತ್ತ್ವಜ್ಞಾಯ ನಮಃ
೭೫. ಓಂ ವೇದ ವೇದಾಂತ ಪಾರಗಾಯ ನಮಃ
೭೬. ಓಂ ವಿಶಾಲಹೃದಯಾಯ ನಮಃ
೭೭. ಓಂ ವಾಗ್ಮಿನೇ ನಮಃ
೭೮. ಓಂ ವಾಚಸ್ಪತಿ ಸದೃಂಗ್ಮತಯೇ ನಮಃ
೭೯. ಓಂ ನೃಸಿಂಹಾರಾಮ ನಿಲಯಾಯ ನಮಃ
೮೦. ಓಂ ನೃಸಿಂಹಾರಾಧನಾ ಪ್ರಿಯಾಯ ನಮಃ
೮೧. ಓಂ ನೃಪಾಲ್ಯರ್ಚಿತ ಪಾದಾಬ್ಜಾಯ ನಮಃ
೮೨. ಓಂ ಕೃಷ್ಣರಾಜಹಿತೇರತಾಯ ನಮಃ
೮೩. ಓಂ ವಿಚ್ಛಿನ್ನ ಹೃದಯ ಗ್ರಂಥಯೇ ನಮಃ
೮೪. ಓಂ ವಿಚ್ಛಿನ್ನಾಖಿಲ ಸಂಶಯಾಯ ನಮಃ
೮೫. ಓಂ ವಿದ್ವಚ್ಛಿರೋ ಭೂಷಣಾಯ ನಮಃ
೮೬. ಓಂ ವಿದ್ವದ್ವೃಂದ ದೃಢಾಶ್ರಯಾಯ ನಮಃ
೮೭. ಓಂ ಭೂತಿ ಭೂಷಿತ ಸರ್ವಾಂಗಾಯ ನಮಃ
೮೮. ಓಂ ನತಭೂತಿಪ್ರದಾಯಕಾಯ ನಮಃ

೮೯. ಓಂ ತ್ರಿಪುಂಡ್ರ ವಿಲಸತ್ಫಾಲಾಯ ನಮಃ
೯೦. ಓಂ ರುದ್ರಾಕ್ಷೈಕ ವಿಭೂಷಣಾಯ ನಮಃ
೯೧. ಓಂ ಕೌಸುಂಭವಸನೋಪೇತಾಯ ನಮಃ
೯೨. ಓಂ ಕರಲಗ್ನ ಕಮಂಡಲವೇ ನಮಃ
೯೩. ಓಂ ವೇಣುದಂಡಲ ಸದ್ಧಸ್ತಾಯ ನಮಃ
೯೪. ಓಂ ಅಪ್ಪವಿತ್ರ ಸಮನ್ವಿತಾಯ ನಮಃ
೯೫. ಓಂ ದಾಕ್ಷಿಣ್ಯ ನಿಲಯಾಯ ನಮಃ
೯೬. ಓಂ ದಕ್ಷಾಯ ನಮಃ
೯೭. ಓಂ ದಕ್ಷಿಣಾಶಾಮಠಾಧಿಪಾಯ ನಮಃ
೯೮. ಓಂ ವರ್ಣಸಂಕರಸಂಜಾತ ಸಂತಾಪಾವಿಷ್ಟ ಮಾನಸಾಯ ನಮಃ
೯೯. ಓಂ ಶಿಷ್ಯಪ್ರಬೋಧನಪಟವೇ ನಮಃ
೧೦೦. ಓಂ ನಮ್ರಾಸ್ತಿಕ್ಯ ಪ್ರವರ್ಧಕಾಯ ನಮಃ
೧೦೧. ಓಂ ನತಾಲಿಹಿತ ಸಂದೇಷ್ಟ್ರೇ ನಮಃ
೧೦೨. ಓಂ ವಿನಯೇಷ್ಟ ಪ್ರದಾಯಕಾಯ ನಮಃ
೧೦೩. ಓಂ ಹಿತಶತೃಸಮಾಯ ನಮಃ
೧೦೪. ಓಂ ಶ್ರೀಮತೇ ನಮಃ
೧೦೫. ಓಂ ಸಮಲೋಷ್ಟಾಶ್ಮ ಕಾಂಚನಾಯ ನಮಃ
೧೦೬. ಓಂ ವ್ಯಾಖ್ಯಾನ ಭದ್ರಪೀಠಸ್ಥಾಯ ನಮಃ
೧೦೭. ಓಂ ಶಾಸ್ತ್ರವ್ಯಾಖ್ಯಾನ ಕೌತುಕಾಯ ನಮಃ
೧೦೮. ಓಂ ಜಗತೀತಲ ವಿಖ್ಯಾತಾಯ ಜಗದ್ಗುರವೇ ನಮಃ

**ಶ್ರೀ ಚಂದ್ರಶೇಖರಭಾರತೀ ಸ್ವಾಮಿನಾಂ ಅಷ್ಟೋತ್ತರ ಶತನಾಮಾವಳಿಃ ಸಮಾಪ್ತ**



# ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳು
# ❀ ರಚಿಸಿದ ಸ್ತೋತ್ರಗಳು ❀

## ಶ್ರೀ ಗುರುರಾಜಸ್ತೋತ್ರಂ

ಗುರುರೇವಗತಿರ್ನಿತರಾಮಿತರಾನ್
ನ ಭಜಾಮಿ ಸುರಾನ್ಭವದುಃಖಯುತಾನ್
ಭವಸಾಗರತಾರಣನೌರಚಿರಾತ್
ಮಮ ಕಷ್ಟಮಸೌ ಹರತು ಪ್ರಸಭಂ

ಗುರುಮೇವ ಸದಾ ಭಜ ಹೇ ಮನುಜ
ತವ ಮೊಹಮಹಾಂಬುಧಿಮಗ್ನಹೃದಃ
ತಮೃತೇನ್ಯಗತಿಸ್ತ್ವಿಹ ನಾಸ್ತಿ ತತಃ
ಸ ಗುರುಃ ಖಲು ತೇಚಿತಮಾಪನುದೇತ್

ಶ್ರೀಮಜ್ಜಗದ್ಗುರುವರೇಣ್ಯನೃಸಿಂಹತೀರ್ಥಃ
ಸಂಸಾರತಪ್ತಜನತಾಪವಿನಾಶದಕ್ಷಃ
ದಕ್ಷಾತ್ಮಜಾಧವವಿರಿಂಚಹರೀಂದ್ರ ಮುಖ್ಯ–
ಲೇಖಾಸ್ತುತೋ ಜಯತಿ ಶೃಂಗಗಿರೌ ಯತೀಂದ್ರಃ

ಹಂಸರಾಜಸ್ಸದಾಸ್ಮಾಕಂ ಮಾನಸೇ ರಮತಾಂ ಮುದಾ
ಯಥಾ ವಾ ಮಾನಸೇ ರಾಜಹಂಸಸ್ಸಂರಮತೇ ಮುದಾ

✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻✻

## ಶಾರದಾ ಗೀತಂ

ಕಲ್ಯಾಣಾನಿ ತನೋತು ಕಾಪಿ ತರುಣೀ ಶೃಂಗಾದ್ರಿಭೂಷಾಯಿತಾ
ಶ್ರೀಮಚ್ಛಂಕರದೇಶಿಕೇಂದ್ರಕಲಿತಂ ಚಕ್ರಂ ಸದಾಧಿಷ್ಠಿತಾ
ದೂರಸ್ಥಾಮಪಿ ಪಾದನಮ್ರಜನತಾಂ ವಿದ್ಯಾಯುರಾರೋಗ್ಯ-
ಸತ್ಸಂತತ್ಯಾದಿಮನೋರಥಾಪ್ತಿಸಹಿತಾಂ ಸಂತನ್ವತೀ ಸತ್ವರಂ

ಶಾರದಾಂಬ ಶರದಿಂದುನಿಭಾನನಭಾಸಿತನಿಖಿಲದಿಗಂತೇ
ಪಾರದೇ ಭವಮಹಾಜಲರಾಶೇಃ ಪಾವಯ ಮಾಂ ವಿಧಿಕಾಂತೆ

ದಂತಕಾಂತಿಜಿತಕುಂದಸುಮೇ ವರಕುಂತಲನಿರ್ಧುತಭೃಂಗೇ
ಶಾಂತಚಿತ್ತಜನಸಂತತಚಿಂತಿತಕೋಟಿಚಂದ್ರಸದೃಶಾಂಗೇ

ಪಾದನಮ್ರಜನವಾಂಛಿತಪೂರಣನಿರ್ಜಿತನಂದನವಲ್ಲಿಕೇ
ಮಾದನೇಷ್ವಸನಗರ್ವನಿಬರ್ಹಣದಕ್ಷಮನೋಹರಚಿಲ್ಲಿಕೇ

ಋಷ್ಯಶೃಂಗಪುರವಾಸವಿಲೋಲೇ ವಶ್ಯಯಂತ್ರಸದೃಶಾಸ್ಯೇ
ಪಶ್ಯದಂಘ್ರಿಶುಕದೇವಹೂತಿಸುತಕಶ್ಯಪಾದಿಸಮುಪಾಸ್ಯೇ





ಛಾಯಾಚಿತ್ರ: ಲೇಖಕ

ಶೃಂಗೇರಿಯ ನೂತನ ರಾಜಗೋಪುರ



ಛಾಯಾಚಿತ್ರ: ಲೇಖಕ

ಶ್ರೀ ವಿದ್ಯಾಶಂಕರ ದೇವಸ್ಥಾನ, ಶೃಂಗೇರಿ



ಛಾಯಾಚಿತ್ರ: ಲೇಖಕ

ಶ್ರೀ ಶಾರದಾಂಬಾ ದೇವಸ್ಥಾನ, ಶೃಂಗೇರಿ



ಛಾಯಾಚಿತ್ರ: ಲೇಖಕ

ಶ್ರೀ ಕಾಲಭೈರವೇಶ್ವರ ದೇವಸ್ಥಾನ, ಶೃಂಗೇರಿ




ಛಾಯಾಚಿತ್ರ: ಲೇಖಕ

ಬೆಟ್ಟದ ಶ್ರೀ ಭವಾನಿಮಲಹಾನಿಕರೇಶ್ವರ ಸ್ವಾಮಿ ದೇವಸ್ಥಾನದ ದಾರಿ, ಶೃಂಗೇರಿ



ಛಾಯಾಚಿತ್ರ: ಲೇಖಕ

ಗುರುಗಳು ಹುಟ್ಟಿದ ಮನೆ (ಈಗಿರುವಂತೆ) ಮಲ್ಲಪ್ಪನ ಬೆಟ್ಟದ ಬೀದಿ, ಶೃಂಗೇರಿ



ಛಾಯಾಚಿತ್ರ: ಲೇಖಕ

ಗುರುಗಳು ಓದಿದ ಶಾಲೆ, ಶೃಂಗೇರಿ (ಮಿಡ್ಲ್ ಸ್ಕೂಲ್)



ಛಾಯಾಚಿತ್ರ: ಲೇಖಕ

ಸದ್ವಿದ್ಯಾ ಸಂಜೀವಿನೀ ಸಂಸ್ಕೃತ ಮಹಾಪಾಠಶಾಲೆ, ಶೃಂಗೇರಿ
(ಗುರುಗಳು ವೇದಾಭ್ಯಾಸ ಮಾಡಿದ ಪಾಠಶಾಲೆ)



ಛಾಯಾಚಿತ್ರ: ಲೇಖಕ

ಅಧಿಷ್ಠಾನ ಮಂದಿರ, ಚಾಮರಾಜಪೇಟೆ, ಬೆಂಗಳೂರು
ಗುರುಗಳು ೧೯೧೧–೧೨ ರಲ್ಲಿ ವಾಸವಿದ್ದ ಮನೆ



ಛಾಯಾಚಿತ್ರ: ಲೇಖಕ

ಶ್ರೀ ಗವಿಗಂಗಾಧರೇಶ್ವರ ದೇವಸ್ಥಾನ, ಬಸವನಗುಡಿ, ಬೆಂಗಳೂರು



ಛಾಯಾಚಿತ್ರ: ಲೇಖಕ

ಶೃಂಗೇರಿಯ ನರಸಿಂಹವನದಲ್ಲಿರುವ ಗುರುಗಳ ಅಧಿಷ್ಠಾನ ಮಂದಿರ



ಛಾಯಾಚಿತ್ರ: ಲೇಖಕ

ಗುರುಗಳು ದೇಹತ್ಯಾಗ ಮಾಡಿದರು ಎನ್ನಲಾದ ಸ್ಥಳ (ತುಂಗಾನದಿಯ ಒಂದು ತೀರ, ಶೃಂಗೇರಿ)



ಲೇಖಕರ **ಮುತ್ತಜ್ಜ** (ತಾಯಿಯ ಅಜ್ಜ) ಸ್ವತಃ ತೆಗೆದ ಗುರುಗಳ ಛಾಯಾಚಿತ್ರ



ಛಾಯಾಚಿತ್ರ: ಗೂಗಲ್

ಪರಮ ವಿರಾಗಿ



ಛಾಯಾಚಿತ್ರ: ಗೂಗಲ್

೧೯೫೪ನೇ ಇಸವಿಯ
ಗುರುಪೂರ್ಣಿಮೆಯಂದು ತೆಗೆದ
ಛಾಯಾಚಿತ್ರ



ಛಾಯಾಚಿತ್ರ: ಗೂಗಲ್

ಮಹಾತಪಸ್ವಿ



ಛಾಯಾಚಿತ್ರ: ಗೂಗಲ್

ಜಗದ್ಗುರುಗಳಾದ ಹೊಸದರಲ್ಲಿ
ತೆಗೆದ ಛಾಯಾಚಿತ್ರ (೧೯೧೨)

ಪ್ರಸಕ್ತ ಕೃತಿ, ತೀರಾ ಇತ್ತೀಚಿನ ಅವಧೂತಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳನ್ನು (೧೮೯೨–೧೯೫೪) ಕುರಿತ ಒಂದು ಭಾವ ಲಹರಿ. ಶ್ರೀ ಸ್ವಾಮಿಗಳವರ ಜೀವನಚರಿತ್ರೆಯನ್ನು ಓದಿ ಪ್ರಭಾವಿತರಾದ ಲೇಖಕ ಗುರುಭಕ್ತರು ತಮ್ಮ ಅಂತರಂಗದಲ್ಲಾದ ಭಾವನೆಗಳನ್ನು ಇಲ್ಲಿ ತೇಲಿಬಿಟ್ಟಿದ್ದಾರೆ. ಮೊದಲು ಸಂಕ್ಷಿಪ್ತವಾಗಿ ಶ್ರೀ ಗುರುಗಳವರ ಜೀವನಚರಿತ್ರೆಯನ್ನು ಬರೆದು ಅನಂತರ ತಾವು ಭೇಟಿ ಮಾಡಿದ ಅನೇಕರ ಅನುಭವಗಳನ್ನು ವಿವರಿಸಿದ್ದಾರೆ. ಲೇಖಕರೇ ಶ್ರೀ ಗುರುಗಳ ಜೀವನಚರಿತ್ರೆಯನ್ನು ಓದಿ, ತಮ್ಮ ದೈನಂದಿನ ನಡೆ–ನುಡಿಗಳಲ್ಲಿ ಬದಲಾವಣೆಯಾದುದನ್ನು ತಿಳಿಸಿದ್ದಾರೆ. ಪುಸ್ತಕ ರೂಪದಲ್ಲಿಯಾದರೂ ಅಂತಹ ಮಹಾತ್ಮರ ಜೀವನಚರಿತ್ರೆಯನ್ನು ಭಕ್ತ ಜನ ಓದಿ ಕೃತಾರ್ಥರಾಗಲಿ ಎಂಬ ಸದುದ್ದೇಶದಿಂದ ಈ ಪುಟ್ಟದಾದ ಮೌಲಿಕ ಕೃತಿಯನ್ನು ರಚಿಸಿದ್ದಾರೆ.

– "ಮುನ್ನುಡಿಯಿಂದ"

ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳ ವ್ಯಕ್ತಿತ್ವವನ್ನು ಕೇವಲ ಪುಸ್ತಕದಲ್ಲಿ ಹಿಡಿದಿಡಲು ಸಾಧ್ಯವಿಲ್ಲ. ಆದರೆ ಅವರ ರೀತಿ ನಮ್ಮಂಥ ಸಾಮಾನ್ಯರಿಗೆ ಜೀವನ ನಡೆಸಲು ಅಸಾಧ್ಯವಾದದ್ದರಿಂದ ಪುಸ್ತಕದ ರೂಪದಲ್ಲಿಯಾದರೂ ಅಂತಹವರ ಜೀವನಚರಿತ್ರೆ ಓದಿ ಕೃತಾರ್ಥರಾಗಬಹುದು.

– "ಲೇಖಕ"

ಪುಸ್ತಕಕ್ಕಾಗಿ ಸಂಪರ್ಕಿಸಿ: 9986378762, 9886867001